COMFORTABLE
LUXURIOUS &
PEACEFUL

**STAY**

AT

# KENCHAMBA LODGE







SUBEDAR CHATRAM ROAD CROSS
NEAR KAPALI THEATRE
GANDHINAGAR
BANGALORE-9

Ph. 27082 GRAM: KENCHMLODG

# ಸಿದ್ಧಗಂಗಾ

ಸಂಪುಟ-೨೪ ಸಂಚಿಕೆ-೧೦ ಅಕ್ಟೋಬರ್, ೧೯೮೮

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ತಾಯಿ ತಂದೆ ಗೈದ ಪೂಜಾ ಪುಣ್ಯದ ಫಲವು
ನನಗಿಂದು ದೊರಕಿತು ತವಸೇವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * *

ಮಡದಿ ಮಕ್ಕಳೊಳಗೆ ತವ ಭಕ್ತಿ ತುಂಬಿರಲು
ಇಡಿಯಾಗಿ ಅರಳಿತು ನಿನಕರುಣೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * *

ಅಣ್ಣ ತಮ್ಮರು ಎನ್ನ ಅಣಿಮಾಡಿದರು ತಂದೆ
ಅಕ್ಕ ತಂಗಿಯರೆನ್ನ ತವ ಸೇವೆಗೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್. ವಿ. ವೀರಭದ್ರಯ್ಯ

# ಈ ಸಂಚಿಕೆಯಲ್ಲಿ

# ಶ್ರೀವಾಣಿ



" ಭಾರತಸ್ಯ ಪ್ರತಿಷ್ಠೇದ್ವೇ ಸಂಸ್ಕೃತಂ ಸಂಸ್ಕೃತಿ ಸ್ತಥಾ।"
ಜಗತ್ತಿನಲ್ಲಿ ಭರತಖಂಡದ ಪ್ರತಿಷ್ಠೆ ಉಳಿದಿರುವುದು ಸಂಸ್ಕೃತ ಭಾಷೆ ಮತ್ತು ಸಂಸ್ಕೃತಿಯಿಂದ. ಎಂಬ ವಿಚಾರವಂತರ ಮಾತೊಂದಿದೆ. ಸಂಸ್ಕೃತ ಜ್ಞಾನ ಪ್ರಧಾನವಾದರೆ. ಭಾರತೀಯ ಸಂಸ್ಕೃತಿ ಉತ್ತಮ ಸಂಸ್ಕಾರ, ವೈವಿಧ್ಯ ಮತ್ತು ವೈಶಿಷ್ಟ್ಯ ಪೂರ್ಣ ತಾತ್ವಿಕ ದೃಷ್ಟಿಯುಳ್ಳದ್ದು. ವೈವಿಧ್ಯ ಪೂರ್ಣ ಸಂಸ್ಕೃತಿಯನ್ನೊಳಗೊಂಡ ಪ್ರಾಂತೀಯ ಮತ್ತು ರಾಷ್ಟ್ರೀಯ ವ್ಯಾಪ್ತಿಯುಳ್ಳ ಹಲವಾರು ಹಬ್ಬಗಳನ್ನು ಸನಾತನವಾಗಿ ಆಚರಿಸುವ ಸಂಪ್ರದಾಯವನ್ನು ಉಳಿಸಿಕೊಂಡು ಬಂದಿದ್ದೇವೆ. ಹಬ್ಬ ಆಚರಣೆ ಸಂಪ್ರದಾಯವಷ್ಟೇ ಅಲ್ಲದೆ ಸುಸಂಸ್ಕೃತ ಜೀವನ ಮೌಲ್ಯವನ್ನೊಳಗೊಂಡಿದೆ. ವೈಚಾರಿಕ ಹಿನ್ನಲೆಯನ್ನುಳ್ಳದ್ದಾಗಿದೆ. ಧರ್ಮ ಮತ್ತು ತಾತ್ವಿಕ ದೃಷ್ಟಿಕೋನಗಳನ್ನೊಳಗೊಂಡಿದೆ. ಅಂತಯೇ ಆಶ್ವಯುಜ ಶುದ್ಧ ನವಮಿ ಮತ್ತು ದಶಮಿಯಂದು ಆಚರಿಸುವ ಆಯುಧ ಪೂಜಾ ಮತ್ತು ವಿಜಯ ದಶಮಿ ವಿಶೇಷ ಮಹತ್ವದ ಸಾಂಕೇತಿಕ ಹಬ್ಬ ಅನೇಕ ಪೌರಾಣಿಕ ಕಥೆ ಪ್ರಸಂಗಗಳನ್ನುಳ್ಳದ್ದಾದರೂ ಶಕ್ತಿದೇವತೆಯ ಉಪಾಸನೆಯ ಮಹತ್ವ ಉಳ್ಳದ್ದಾಗಿದೆ. ಮನುಷ್ಯನಲ್ಲಿ ದುಷ್ಟಶಕ್ತಿಯ ಸಂಹಾರಗೈದು ಶಿಷ್ಟ ಶಕ್ತಿಯ ಸಂಚಯನ ಜೀವನದಲ್ಲಿ ಉಂಟಾಗಬೇಕಾಗುತ್ತದೆ. ದುರ್ಗುಣವಳಿದು ಸದ್ಗುಣ ಸಂಪನ್ನನಾಗಬೇಕಾಗುತ್ತದೆ. ಅಜ್ಞಾನ, ದಾರಿದ್ರ್ಯ ಮತ್ತು ದುರ್ಬಲತೆಯನ್ನು ನೀಗಿ ಸುಜ್ಞಾನ, ಸಮೃದ್ಧಿ ಮತ್ತು ಶೌರ್ಯಾದಿಗಳನ್ನು ಮೈಗೂಡಿಸಿ ಕೊಳ್ಳಬೇಕು. ಶಕ್ತಿದೇವತೆಗಳಾದ ಸರಸ್ವತಿ, ಲಕ್ಷ್ಮೀ ಮತ್ತು ದುರ್ಗಾದೇವತೆಯರ ಉಪವಾಸನೆಯಿಂದ ಅಪೂರ್ವ ಶಕ್ತಿ ಶಾಲಿಗಳಾಗಬೇಕು. ಈ ಅಸಾಧಾರಣ ಶಕ್ತಿ ಸಂಪನ್ನತೆಯಿಂದ ಅಸುರೀ ಶಕ್ತಿಯ ನಾಶಮಾಡಿ ದೈವೀ ಶಕ್ತಿಯ ಸಂಪಾದನೆ ಮಾಡಿಕೊಳ್ಳಬೇಕು. ಜೀವನ ಸಾರ್ಥಕ ಮಾಡಿಕೊಳ್ಳಬೇಕು. ದಂಭಾ, ದರ್ಪ, ಕ್ರೋಧ ಮತ್ತು ಅಜ್ಞಾನ ಮೊದಲಾದ ಶಕ್ತಿಗಳು ವ್ಯಕ್ತಿಯ ಬಂಧನಕ್ಕೆ ಕಾರಣವಾದರೆ. ದೈವೀ ಸಂಪತ್ತು ಮೋಕ್ಷಕ್ಕೆ ಕಾರಣವಾಗುತ್ತದೆ. " ದೈವೀ ಸಂಪದ್ವಿ ಮೋಕ್ಷಾಯ । ನಿಬಂಧಾಯಾ ಸುರೀಮತಾ ॥ ಎಂದು ಗೀತಾ ವಾಕ್ಯ ಸ್ಪಷ್ಟಪಡಿಸುತ್ತದೆ. ದೈವೀ ಸಂಪತ್ತಿನಗಳಿಕೆ ವಿಜಯ ದಶಮೀ ಆಚರಣೆಯ ಮುಖ್ಯ ಉದ್ದೇಶ.

## ಸಿದ್ಧಗಂಗಾ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104
ತುಮಕೂರು ಜಿಲ್ಲೆ

ಪ್ರಧಾನ ಸಂಪಾದಕರು
**ಪ॥ ಚನ್ನಪ್ಪ ಎರೇಸೀಮೆ**

* * *

ಸಂಪಾದಕರು
**ಹೆಚ್. ವಿ. ವೀರಭದ್ರಯ್ಯ**

* * *

ಸಹ, ಸಂಪಾದಕರು
**ಬಿ. ವೀರಭದ್ರಯ್ಯ**
**ಸಿ. ಎಸ್. ಚಂದ್ರಶೇಖರಯ್ಯ**

* * *

ಜಾಹೀರಾತು ವಿಭಾಗ
**ಎಂ. ರೇಣುಕಾರಾಧ್ಯ**

* * *

ಪ್ರಸಾರ ವಿಭಾಗ
**ಆರ್. ಎಸ್. ಮಲ್ಲೇಶಪ್ಪ**

* * *

ಪ್ರಕಾಶಕರು
**ಹೆಚ್. ಬಿ. ಗಂಗಾಧರಯ್ಯ**
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು
**ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ**

* * *

ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

### ಚಂದಾ ವಿವರ

ವಾರ್ಷಿಕ ಚಂದಾ 20 - 00 ರೂ
ಅಜೀವ ಸದಸ್ಯತ್ವ 201 - 00 ರೂ


## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆ ಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಅಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.


**" ಸಂಪಾದಕರು "**
**'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ**
ಶ್ರೀ ಸಿದ್ಧಗಂಗಾ ಕ್ಷೇತ್ರ-572104
ತುಮಕೂರು ಜಿಲ್ಲೆ.


ಇವರಿಗೆ ಕಳಿಸಿ ಕೊಡಬೇಕಾಗಿ ಪ್ರಾರ್ಥನೆ

# ಸಂಪಾದಕೀಯ

## ಗಾಂಧಿ ಜಯಂತಿ

ಗಾಂಧೀಜಿಯಿಂದ ದೇಶಕ್ಕೆ ಸ್ವಾತಂತ್ರ್ಯ ಬಂದಿತು. ಅವರ ನಿಕಟವರ್ತಿಗಳಾಗಿದ್ದ ದೇಶ ಭಕ್ತರಿಂದ ಪ್ರಜಾಪ್ರಭುತ್ವಸರ್ಕಾರ ಪ್ರಾರಂಭವಾಯಿತು. ಜಗತ್ತಿನ ಎದುರು ತಲೆಎತ್ತಿ ಬಾಳಬೇಕೆಂಬ ಆಶೋತ್ತರಗಳನ್ನು ಹೊತ್ತುದುಡಿದರು. ಹಿರಿಯುರು ವ್ಯಕ್ತಿ ಚಾರಿತ್ರಕ್ಕೆ ನೈತಿಕತೆಗೆ ಹೆಚ್ಚು ಗಮನ ಕೊಟ್ಟಿದ್ದರು ಅವರು. ಭರತ ಖಂಡದ ಜೀವನಕ್ಕೆ ಹೊಸ ಸೂರ್ಯನಾಗಿ ಬಂದರು. ಜೀವನದುದ್ದಕ್ಕೂ ತಾಯ್ನಾಡಿಗಾಗಿ ತೇದುಕೊಂಡರು ತಮ್ಮನ್ನು. ದೇಶದ ಪ್ರತಿಯೊಂದು ಮಣ್ಣಿನ ಕಣಕಣದಲ್ಲಿಯೂ ಅವರು ಭಕ್ತಿ ನಿಷ್ಠೆಯನ್ನುಳ್ಳವರಾಗಿದ್ದರು. ರಾಷ್ಟ್ರದ ಸಾಂಸ್ಕೃತಿಕ ಪರಂಪರೆಯ ಪ್ರಣತಿಯೇ ಅವರಾಗಿದ್ದರು. 1924 ರಲ್ಲಿ ಬೆಳಗಾಂ ಕಾಂಗ್ರೆಸ್ ಅಧಿವೇಶನಕ್ಕೆ ದಯಮಾಡಿಸಿದಾಗ "ಕರ್ನಾಟಕದ ಜನತೆಗೆ ಹೊಸದಾಗಿ ಹೇಳಬೇಕಾದುದೇನೂ ಇಲ್ಲ, ಬಸವಣ್ಣನವರಂಥ ಮಹಾನುಭಾವರು ಜನ್ಮತಳೆದ ಪುಣ್ಯಭೂಮಿ ಇದು ಅವರು ಮಾಡಿದ ಸುಧಾರಣೆಗಗಳಲ್ಲಿ. ಎಲ್ಲವನ್ನು ಮಾಡಲು ನನ್ನಿಂದಾಗಿಲ್ಲ. ಅಂಥವರ ಆದರ್ಶದ ಬೆಳಕಿನಲ್ಲಿ ಮುಂದೆ ಸಾಗೋಣ ಎಂಬ ಮಾತುಗಳನ್ನಾಡಿದರು. ಅರಬೆತ್ತಲೆಯ ಫಕೀರರಾಗಿಯೇ ಗಾಂಧೀಜಿ ಕೋಟಿ ಕೋಟಿ ಭಾರತೀಯರ ಹೃದಯವನ್ನು ಗೆದ್ದ ಶ್ರೀಮಂತರು. ಅವರು ತೋರಿಸಿಕೊಟ್ಟ ಅಹಿಂಸಾ ಮಾರ್ಗ ಸತ್ಯಾಗ್ರಹಗಳು ಯುವ ಜನತೆಗೆ ದಿಕ್ಸೂಚಿಯಾದವು. ಮಕ್ಕಳನ್ನು ಕುರಿತು ಅವರೊಂದಿಗೆ ಕಥೆ ಹೇಳುತ್ತಿದ್ದರು – ಮೂರು ಕೋತಿಗಳ ಕಥೆ. ಒಂದು ಕಣ್ಮುಚ್ಚಿದೆ, ಒಂದು ಕಿವಿಯಲ್ಲಿ ಬೆರಳಿಟ್ಟಿದೆ, ಇನ್ನೊಂದು ಬಾಯಿಯನ್ನು ಭದ್ರವಾಗಿ ಮುಚ್ಚಿಕೊಂಡಿದೆ. ಮಕ್ಕಳಿಗೆ ಅವುಗಳನ್ನು ತೋರಿಸುತ್ತ ಗಾಂಧೀಜಿ ಹೇಳುತ್ತಿದ್ದರು – ಕೆಟ್ಟದ್ದನ್ನು ನೋಡ ಬೇಡ, ಕೆಟ್ಟದನ್ನು ಕೇಳ ಬೇಡ, ಕೆಟ್ಟದನ್ನು ಆಡ ಬೇಡ ಎನ್ನುತ್ತವೆ ಆ ಕೋತಿಗಳು ಎಂದು ಮಕ್ಕಳ ತಾತನಾಗಿದ್ದ ಗಾಂಧೀಜಿ ಒಳ್ಳೆಯ ಕಥೆಗಾರರು ಸಹ. ಆದರಿಂದು ಏನಾಗಿದೆ? ಕೋತಿಗಳನ್ನು ಭಾರತೀಯರಾದ ನಾವೆಲ್ಲ ಅನುಸರಿಸುತ್ತಿದ್ದೇವಲ್ಲವೆ? ಅವರು ಹೇಳಿದ್ದಕ್ಕೆ ಪಶ್ಚಿಮ ಮುಖವಾಗಿ ಒಳ್ಳೆಯದನ್ನು ನೋಡುವುದಿಲ್ಲ ಒಳ್ಳೆಯದನ್ನು ಕೇಳುವುದಿಲ್ಲ ಒಳ್ಳೆಯದನ್ನು ಆಡುವುದಿಲ್ಲ ಎಂಬ ಪ್ರವೃತ್ತಿಯೇ ನಮಗಿಂದು ಆದರ್ಶವಾಗುತ್ತಿದೆ-ಯಲ್ಲವೇ?

ಗಾಂಧೀಜಯಂತಿಯಂದು ಅವರ ಸಮಾಧಿಯ ಮೇಲೆ ಹೂವಿಡುತ್ತೇವೆ, ರಾಮಧುನ್ ಹಾಡುತ್ತೇವೆ, ಭಾವಚಿತ್ರಕ್ಕೆ ಹಾರಹಾಕುತ್ತೇವೆ, ಸುವಾಸಯುಕ್ತ ಗಂಧ ಕಡ್ಡಿ ಹಚ್ಚುತ್ತೇವೆ ಹೊಸದಾಗಿ ಅವರ ಭಾವಚಿತ್ರವಿರುವ ಫೋಟೋವೊಂದನ್ನು

ಅನಾವರಣಮಾಡುತ್ತೀವೆ. ಅಷ್ಟೇತಾನೆ ? ಕವಿ ಶಿವರುದ್ರಪ್ಪನವರು ಹೇಳುವಂತೆ "ಅನಾವರಣ ವಾಯಿತಂತೆ ಗಾಂಧೀಜಿಯ ಚಿತ್ರಕೆ, ಸತ್ತಗಾಂಧಿ ಅತ್ತಗೇನೋ ನಡೆದ ಈ ವಿಚಿತ್ರಕ್ಕೆ" ಗಾಂಧೀಜಿ ತೋರಿದ ಹಾದಿಯಲ್ಲಿ ನಡೆದಿದ್ದೇವೆಯೇ? ಅವರ ಕನಸನ್ನು ನನಸನ್ನಾಗಿಸುವ ಪ್ರಯತ್ನ ನಮ್ಮದಾಗಿದೆಯೇ ? ಇಂದು ದೇಶ ಯಾರಿಗೆ ಬೇಕಾಗಿದೆ ? ಪಕ್ಷಬೇಕಾಗಿದೆ; ಪ್ರತಿಷ್ಠೆ ಬೇಕಾಗಿದೆ. ಪ್ರಜಾಕಲ್ಯಾಣ ಎಲ್ಲಿದೆ ? ಅದಕ್ಕೆಂದೇ ಕವಿ ಹೇಳುತ್ತಾರೆ "ಅನಾವರಣವಾಗ ಬೇಕು ಮೊದಲು ನಮ್ಮ ಹೃದಯಕೆ, ಅನಾವರಣವಾದ ಮೇಲೆ ಸಿದ್ಧವಾಗು ಶಿಕ್ಷಗೆ" ಎಂಬುದಾಗಿ ಸತ್ಯವಂತರಿಗಿದು. ಕಾಲವಲ್ಲ ಎಂದರು ಪುರಂದರದಾಸರು. ದೇಶ, ಧರ್ಮ, ಸಂಸ್ಕೃತಿಗಳ ಬಗ್ಗೆ ಗಂಭೀರವಾಗಿ ಚಿಂತಿಸಿ ಅನುಷ್ಠಾನಗೊಳಿಸುವವರನ್ನು ಹಿಂದೆ ತಳ್ಳುತ್ತ ಮುಂದೆ ನಡೆದಿದ್ದೇವೆ ಇಂದು. ಇದಲ್ಲವೆ ಗಾಂಧೀ ಜಯಂತಿಯ ಆಚರಣೆ ?

## ಅಭಿನಂದನೆ

ಶ್ರೀ ಸಿದ್ಧಗಂಗಾ ಪೌಢಶಾಲೆಯ ವಿದ್ಯಾರ್ಥಿಗಳೂ, ಶ್ರೀ ಮಠದ ಅಭಿಮಾನಿಗಳೂ ಆದ ಪ್ರೊ. ಜಿ. ಎಸ್. ಸಿದ್ಧಲಿಂಗಯ್ಯನವರು ದಿನಾಂಕ 4–10–88 ರಂದು ಕಾಲೇಜು ಶಿಕ್ಷಣದ ನಿರ್ದೇಶಕರಾಗಿ ನೇಮಕಗೊಂಡದ್ದಕ್ಕಾಗಿ "**ಸಿದ್ಧಗಂಗಾ**" ತುಂಬು ಹೃದಯ ಅಭಿನಂದನೆಗಳನ್ನು ಸಲ್ಲಿಸಲು ಸಂತೋಷಿಸುತ್ತದೆ. ಶ್ರೀಯುತರು ವಿದ್ವತ್ತಿಗೆ ಹೆಸರಾಗಿರುವಂತೆಯೇ ದಕ್ಷ ಆಡಳಿತಕ್ಕೂ ಖ್ಯಾತ ನಾಮರಾಗಿರುವುದಲ್ಲದೆ, ಪ್ರಬುದ್ಧ ಪ್ರಾಧ್ಯಾಪಕರಾಗಿ ಸಹಸ್ರಾರು ವಿದ್ಯಾರ್ಥಿಗಳಿಗೆ ಆದರ್ಶ ಪ್ರಾಧ್ಯಾಪಕರೆನಿಸಿದ್ದಾರೆ ಶ್ರೀಯುತರು ಉತ್ತಮ ಕವಿಗಳಾಗಿ, ವಿಮರ್ಶಕರಾಗಿ ಸಾರಸ್ವತ ಲೋಕಕ್ಕೆ ಚಿರ ಪರಿಚಿತರು. ಅವರು ಬರೆದ ರಸಗಂಗೆ, ಉತ್ತರ, ಗೌತಮಬುದ್ಧ, ಭರತೇಶವೈಭವದಸಮೀಕ್ಷೆ, ಇಂಗ್ಲಿಷ್ ಗೀತೆಗಳ ಸಮೀಕ್ಷೆ, ವಚನಸಾಹಿತ್ಯ ಪರವಾದ ಲೇಖನಗಳು ವಿದ್ವನ್ಮನ್ನಣೆಗಳಿಸಿವೆ ಶ್ರೀಯುತ ಜಿ.ಎಸ್. ಸಿದ್ಧಲಿಂಗಯ್ಯನವರ ಸಲಹೆ, ಸಹಕಾರಗಳು '**ಸಿದ್ಧಗಂಗಾ**' ಕ್ಕೆ ದೊರೆಯುತ್ತ ಬಂದಿರುವುದನ್ನು ಕೃತಜ್ಞತಾಪೂರ್ವಕವಾಗಿ ಸ್ಮರಿಸುತ್ತದೆ. ಕಾಲೇಜು ಶಿಕ್ಷಣದ ನಿರ್ದೇಶಕರಾಗಿ ಉತ್ತಮ ಪರಂಪರೆಯನ್ನು ಹಾಕುವಂತಾಗಲಿ ಎಂದು ಹಾರೈಸುತ್ತ ಮತ್ತೊಮ್ಮೆ ಅಭಿನಂದನೆಗಳನ್ನು ಸಲ್ಲಿಸುತ್ತದೆ "**ಸಿದ್ಧಗಂಗಾ**".

ಆರೋಗ್ಯ ರಹಸ್ಯ-2

## ಮಾದಕ ಪದಾರ್ಥಗಳು

ಮಹಾತ್ಮ ಗಾಂಧಿ

ಹಿಂದುಸ್ಥಾನದಲ್ಲಿ ಬಳಕೆಯಲ್ಲಿರುವ ಮಾದಕ ಪದಾರ್ಥಗಳು—ಮದ್ಯ, ಭಂಗಿ, ಗಾಂಜಾ, ಹೊಗೆಸೊಪ್ಪು, ಅಫೀಮು. ಮದ್ಯ ಎಂದರೆ ಈ ದೇಶದಲ್ಲಿಯೇ ಆಗುವ ಹೆಂಡ ಸಾರಾಯಿ, ಪರದೇಶಗಳಿಂದ ಬರುವ ಸಾರಾಯಿ, ಅರಕ ಎಲ್ಲವೂ. ಇವೆಲ್ಲವೂ ಕಡ್ಡಾಯ ವಾಗಿ ವರ್ಜಿಸಬೇಕು. ಮದ್ಯ ಮನುಷ್ಯನನ್ನು ವೈಪರೀಸುತ್ತದೆ ಅದರ ಅಮಲಿನಲ್ಲಿ ದ್ದಾಗ ಅವನು ಯಾವ ಉಪಯುಕ್ತ ಕಾರ್ಯವನ್ನೂ ಮಾಡಲಾರ. ಮದ್ಯಪಾನದ ಚಟಕ್ಕೆ ಬಿದ್ದವರು ತಾವೂ ಹಾಳಾಗಿ ತಮ್ಮವರನ್ನೂ ಹಾಳುಮಾಡುತ್ತಾರೆ. ಅವರಿಗೆ ಗಾಂಭೀರ್ಯ, ಔಚಿತ್ಯ ಎಲ್ಲವೂ ಮಾಯವಾಗುತ್ತವೆ.

ಮಿತವಾಗಿ ಮದ್ಯಪಾನಮಾಡಿದರೆ ಒಳ್ಳೆಯದು ಎನ್ನುವ ಒಂದು ವಿಚಾರವೂ ಇದೆ, ನನಗೆ ಅವರ ವಾದದಲ್ಲಿ ಸ್ವಲ್ಪವಾದರೂ ಹುರುರು ಕಂಡಿಲ್ಲ. ಅವರ ವಾದ ವನ್ನು ಒಂದುವೇಳೆ ಒಪ್ಪಿದರೂ ಈ ಮಾನವವರ್ಗದಲ್ಲಿ ಅಸಂಖ್ಯ ಜನ ಶಿಸ್ತಿಗೆ ಒಳ ಪಟ್ಟಿರುವವರಲ್ಲ ಎಂಬುದನ್ನು ಗಮನಿಸಲೇಬೇಕಲ್ಲ. ಆದ್ದರಿಂದ ಈ ಬಹುಸಂಖ್ಯೆಯ ಜನರ ಹಿತಕ್ಕಾಗಿಯಾದರೂ ಮದ್ಯಪಾನವನ್ನು ನಿಷೇಧಿಸುವುದು ನಮ್ಮ ಕರ್ತವ್ಯ.

ಪಾರಸೀಗಳು ತಾಳೆಹೆಂಡವನ್ನು ಬಹಳವಾಗಿ ಸಮರ್ಥಿಸಿದ್ದಾರೆ ತಾಳೆ ಹೆಂಡ ಮಾದಕವಾದರೂ ಆಹಾರ ಪದಾರ್ಥ, ಜೀರ್ಣಕಾರಿ ಎಂದು ಅವರ ವಾದ. ಈ ವಾದವನ್ನು ಕೂಲಂಕಷವಾಗಿ ಪರಿಶೀಲಿಸಿದ್ದೇನೆ. ಇದರ ಬಗ್ಗೆ ಬೇಕಾದಷ್ಟು ಪುಸ್ತಕ ಗಳನ್ನು ಓದಿದ್ದೇನೆ. ಆದರೆ ತಾಳೆಹೆಂಡ ಬಡವರನ್ನು ಯಾವ ಅಧೋಗತಿಗೆ ಇಳಿಸು ತ್ತದೆಯೋ ಕಣ್ಣಾರೆ ಕಂಡಿದ್ದೇನೆ. ಆದ್ದರಿಂದ ಮನುಷ್ಯನ ಆಹಾರದಲ್ಲಿ ಇದಕ್ಕೆ ಸ್ಥಾನ ವಿಲ್ಲ ಎಂಬ ತೀರ್ಮಾನಕ್ಕೆ ಬಂದಿದ್ದೇನೆ.

ತಾಳೆ ಹೆಂಡದಿಂದ ಬರುತ್ತವೆ ಎಂಬ ಲಾಭಗಳೆಲ್ಲ ಸಮಸ್ತ ಆಹಾರ ಪದಾ ರ್ಥಗಳಲ್ಲಿಯೂ ಇವೆ. ತಾಳೆ ಹೆಂಡ, ತಾಳೆ ಖರ್ಜೂರದ ಗಿಡಗಳ ರಸದಿಂದ ಮಾಡಿ ದುದು. ಆ ರಸವನ್ನು ನೀರಾ ಎನ್ನುತ್ತಾರೆ, ನೀರಾ ಕುಡಿದು ಅನೇಕರು ಅಜೀರ್ಣ ವನ್ನು ಹೋಗಲಾಡಿಸಿಕೊಂಡಿದ್ದಾರೆ. ನಾನೂ ನೀರಾ ಕುಡಿದು ನೋಡಿದ್ದೇನೆ. ಜೀರ್ಣ ಕಾರಿಯಾಗಿ ಕಾಣದಿದ್ದರೂ ಕಬ್ಬಿನಹಾಲಿನ ಹಾಗೆ ಇದೂ ಒಂದು ಆಹಾರ ಎನಿ ಸಿತು. ಬೆಳಗ್ಗೆ ಚಹಾ ಕುಡಿಯುವ ಬದಲು ಒಂದು ಲೋಟಾ ನೀರಾ ಕುಡಿದರೆ ಮತ್ತೇನು ತಿಂಡಿ ಬೇಕಾಗುವುದಿಲ್ಲ, ಕಬ್ಬಿನ ಹಾಲಿನಂತೆ ತಾಳೆಯ ರಸವನ್ನೂ ಕುದಿಸಿ

ತಾಳೆಬೆಲ್ಲವನ್ನು ಮಾಡಬಹುದು. ನಮ್ಮ ದೇಶದಲ್ಲಿ ಅನೇಕ ಬಗೆಯ ತಾಳೆ ಗಿಡಗ ಸಹಜವಾಗಿ ಬೆಳೆಯುತ್ತವೆ. ಎಲ್ಲದರಲ್ಲೂ ಪಾನಯೋಗ್ಯ ರಸವಿದೆ. ನೀರಾ ಬಹ ಬೇಗನೆ ಹಳಸುತ್ತದೆ. ಆದ್ದರಿಂದ ಒಡನೆಯೆ, ಗಿಡದಿಂದ ಇಳಿಸಿದೊಡನೆಯೆ, ಕುಡಿ ಯುವುದು ಉತ್ತಮ. ಹೀಗೆ ನೀರಾ ಸೇವನೆಮಾಡುವುದು ಎಲ್ಲರಿಗೂ ಸಾಧ್ಯವ ಆದ್ದರಿಂದ ನೀರಾವನ್ನು ಬೆಲ್ಲಮಾಡುವುದೇ ಉತ್ತಮ. ಕಬ್ಬಿನ ಬೆಲ್ಲದ ಬದಲು ತಾ ಬೆಲ್ಲವನ್ನೇ ಬಳಸಬಹುದು. ಕೆಲವರು ಕಬ್ಬಿನ ಬೆಲ್ಲದ ಬದಲು ತಾಳೆ ಬೆಲ್ಲವನ್ನೆ ಬಳಸುತ್ತಾರೆ. ತಾಳೆ ಬೆಲ್ಲ ಆ ಬೆಲ್ಲಕ್ಕಿಂತ ಕಡಿಮೆ ಸಿಹಿ ಆದ್ದರಿಂದ ಹೆಚ್ಚು ತಿನ್ ಬಹುದು. ಅಖಿಲ ಭಾರತ ಗ್ರಾಮೋದ್ಯೋಗ ಸಂಘ ತಾಳೆ ಬೆಲ್ಲದ ಪ್ರಚಾರವನ್ನು ಸಾಕಷ್ಟು ಮಾಡಿದೆ. ಇನ್ನೂ ಎಷ್ಟೋ ಮಾಡಬೇಕು. ಹೆಂಡಕ್ಕಾಗಿ ಉಪಯೋಗಿಸುವ ಮರಗಳನ್ನು ಬೆಲ್ಲಕ್ಕಾಗಿ ಉಪಯೋಗಿಸಿದರೆ ಹಿಂದೂಸ್ಥಾನದಲ್ಲಿ ಸಕ್ಕರೆಯ ಅಭಾವವೇ ಇರದು. ಬಡವರಿಗೆ ಅಗ್ಗವಾಗಿ ಬೆಲ್ಲ ಸಿಕ್ಕೀತು. ತಾಳೆಬೆಲ್ಲದ ಕಾಕಂಬಿಯನ್ನೂ ಸಕ್ಕ ರೆಯನ್ನೂ ಮಾಡಬಹುದು, ಆದರೆ ಸಕ್ಕರೆಗಿಂತ ಬೆಲ್ಲವೇ ಗುಣದಲ್ಲಿ ಶ್ರೇಷ್ಠ. ಬೆಲ್ಲ ದಲ್ಲಿರುವ ಲವಣಗಳು ಸಕ್ಕರೆ ಮಾಡುವಾಗ ಹೋಗುತ್ತವೆ. ಬೆಳ್ಳನೆ ಮೈದಹಿಟ್ಟು, ಗಿರಿಣಿಮಾಡಿಸಿದ ಅಕ್ಕಿ ತಮ್ಮ ಆಹಾರದ ಅಂಶಗಳನ್ನು ಕಳೆದುಕೊಳ್ಳುವಂತೆಯೇ ಸಕ್ಕರೆಯಲ್ಲಿಯೂ ಬೆಲ್ಲದ ಪೌಷ್ಟಿಕಗುಣ ಕಳೆದುಹೋಗುತ್ತದೆ. ಸಾಧಾರಣವಾಗಿ ಆಹಾರ ಪದಾರ್ಥಗಳನ್ನು ಸಹಜ ರೂಗದಲ್ಲಿ ಸೇವಿಸುವುದೇ ಸರಿ, ಅದು ಲಾಭದಾಯಕ.

ತಾಳೆ ಹೆಂಡದ ಪ್ರಸ್ತಾಪದಿಂದ ನೀರಾ, ಅಲ್ಲಿಂದ ಬೆಲ್ಲ. ಹೀಗೆ ಬಂದೆ. ಮತ್ತೆ ಮದ್ಯದ ವಿಷಯಕ್ಕೇ ಹೋಗೋಣ.

ಮದ್ಯಪಾನದ ದುಷ್ಟ ಪರಿಣಾಮದ ಬಗ್ಗೆ ನನಗಿರುವಷ್ಟು ಅನುಭವ ಸಾರ್ವ ಜನಿಕ ಕಾರ್ಯಕರ್ತರಿಗೆ ಯಾರಿಗೂ ಇರಲಾರದು. ದಕ್ಷಿಣ ಆಫ್ರಿಕಾದಲ್ಲಿ ಕೆಲಸ ಮಾ ಡಲು ಬಂದ ಭಾರತೀಯ ಕೂಲಿಗಾರರೆಲ್ಲರೂ ಕುಡುಕರು. ಡಾಕ್ಟರರ ಅನುಮತಿ ಪತ್ರವಿಲ್ಲದೆ ಭಾರತೀಯ ಮನೆಗಳಿಗೆ ಮದ್ಯವನ್ನು ಒಯ್ಯುವಂತಿಲ್ಲ; ಕಾನೂನು ಹಾಗಿ ತ್ತು. ಹೇಗಸರೂ ಸಹ ಈ ದುಷ್ಟ ಚಟಕ್ಕೆ ಬಲಿಯಾಗಿದ್ದರು. ಅತಿ ದಯನೀಯ ಸ್ಥಿತಿಯ ನಾನವರನ್ನು ನೋಡಿದ್ದೇನೆ. ಈ ಹೆಂಡದಂಗಡಿಗಳ ಮುಂದಿನ ದೃಶ್ಯಗಳನ್ನು ಕಂಡವರು ಯಾರೂ ಮದ್ಯಪಾನವನ್ನು ಸಮರ್ಥಿಸಲಾರರು.

ಆಫ್ರಿಕಾದ ನೀಗ್ರೋಗಳು ಮೊದಲು ಕುಡಿಯುತ್ತಿರಲಿಲ್ಲ. ಈಗ ಕುಡಿತ ಬಂದು ಅವರು ಹಾಳಾಗಿದ್ದಾರೆ. ನೀಗ್ರೋ ಕೆಲಸಗಾರರು ಅನೇಕರು ತಮ್ಮ ಗಳಿಕೆಯನ್ನೆಲ್ಲಾ ಕುಡಿತಕ್ಕೇ ಹಾಳುಮಾಡಿ, ಅವರ ಬಾಳು ಗಾಂಭೀರ್ಯ ಗೆಟ್ಟುದನ್ನು ನೋಡಿದ್ದೇನೆ.

( 29 ನೆ ಪುಟ ನೋಡಿ)

# ಸಿದ್ಧಗಂಗಾಷ್ಟಕಂ

ಸುರನುತಪಾಲಿನಿ ಮುನಿಗಣಮಾಲಿನಿ ಬುಧಗಣತೋಷಿಣಿ ವಿಷ್ಣುನುತೇ
ಬಹುಸುಖದಾಯಿನಿ ಮಂಗಲಕಾರಿಣಿ ಭವಜಯಕಾರಿಣಿ ಪಾಲಯಮಾಮ್ ||೧||

ಪಾಪವಿನಾಶಿನಿ ಜೂಟವಿಭೂಷಿಣಿ ಶಂಭುವಿಲಾಸಿನಿ ಭಕ್ತನುತೇ
ಭಕ್ತಿವಿದಾಯಿನಿ ಮುಕ್ತಿಸದಾಯಿನಿ ರೋಗನಿವಾರಿಣಿ ಪಾಲಯಮಾಮ್ ||೨||

ಯೋಗವಿಭಾವಿನಿ ಮೋಹವಿನಾಶಿನಿ ದುಃಖನಿವಾರಿಣಿ ಸಿದ್ಧಿಯುತೇ
ಪಶುಪತಿಭೂಷಿಣಿ ಸುರಪತಿಸೇವಿನಿ ಭವಭಯ ಹಾರಿಣಿ ಪಾಲಯಮಾಮ್ ||೩||

ಸಜ್ಜನರಕ್ಷಿಣಿ ಖಲಜನಮಾರಿಣಿ ಮಣಿಗಣಶೋಭಿನಿ ಸರ್ವನುತೇ
ಮಂಗಲರೂಪಿಣಿ ಶೋಕನಿವಾರಿಣಿ ಹಿಮಗಿರಿನಂದಿನಿ ಪಾಲಯಮಾಮ್ ||೪||

ತ್ರಿಭುವನ ಪೋಷಿಣಿ ದುರ್ಗತಿನಾಶಿನಿ ಶಂಕರತೋಷಿಣಿ ಹರ್ಷಯುತೇ
ದನುಜನಿರೋಧಿನಿ ಸುರಗಣನಂದಿನಿ ಪಾಪವಿಮೋಚಿನಿ ಪಾಲಯಮಾಮ್ ||೫||

ಸಹಸ್ರಶಃ ಸಂತಿ ನಕಿಂ ಸ್ರವಂತ್ಯಃ ಪುನಂತಿ ಯಾಃ ಸ್ನಾನವಶೇನ ದೇಹಮ್
ನ ಕೇವಲಂ ಗಾತ್ರಶುಚಿಂ ತ್ವದೀಯೇ ಭಜಂತಿ ಮುಕ್ತಿಂ ಚ ಜನಾಃ ಪ್ರವಾಹೇ||೬

ಯಾಚೇ ನ ಗಂಗೇ! ವರಸಿದ್ಧಗಂಗೇ ತ್ವಾಂ ರಾಜ್ಯಲಕ್ಷ್ಮೀಮಭಿಮಾನಧಾತ್ರೀಮ್
ಅಭ್ಯರ್ಥಯೇ ಬದ್ಧಶಯದ್ವಯೋಽಹಮ್ । ಸದಾಮುದಾ ತೇಽಂಘ್ರಿಸರೋಜ
ಪೂಜಾಮ್ ||೭||

ಸಹಸ್ರಂ ವಿದ್ಯಂತೇ ಜನನೀ ವಿಬುದಾಃ ಕ್ಷುದ್ರಫಲದಾ । ನಯಾಚೇ ಸ್ವಪ್ನೇ
ವಾ ಕೃಪಣ ಇವತಾನ್ ದೈನ್ಯವಚಸೈಃ
ತ್ವಮೇಕಾ ಶಕ್ತಾ ಭೋಃಕುಲುಷಿತ ಧಿಯಾಂ ಪಾಪಹರಣೇ । ತತಸ್ತ್ವಾಂ-
ಯಾಚೇಽಹಂ ನಿರುಪಮ ಸುಖಾಂ ಮೋಕ್ಷ ಪದವೀಮ್ ||೮||

– ವಿದ್ವಾನ್ ಬಿ. ಗಂಗಪ್ಪ.

# ಶ್ರೀ ಶಿವಕುಮಾರಸ್ವಾಮ್ಯಷ್ಟಕಂ

ಶ್ರೀಗುರುವೆ ನಿಜದರಿವೆ ಶಾಂತಿಸುಖದಾಗರವೆ
ಭೋಗಭಾಗ್ಯವನೀವ ಭೂತಳದ ಸುರತರುವೆ
ನಾಗಭೂಷಣಭಕ್ತ ಜನರ ಭಾಗ್ಯೋದಯವೆ ದೀನಜನ ವರಬಂಧುವೆ।
ತ್ಯಾಗತಳಹದಿ ಮೇಲೆ ನಿಂತ ಸುರಮಂದಿರವೆ
ಯೋಗಿಜನಮರಕತವೆ ಸೌಂದರ್ಯಸಾಗರವೆ
ಬಾಗಿ ಮಣಿಯುವೆಪ್ರಭುವೆ ಸಿದ್ಧಗಂಗಾಮಠದ ಶಿವಕುಮಾರೇಶ
ವಿಭುವೆ ||೧||

ಶಿವರೂಪವಂ ಧರಿಸಿ ಭುವಿಯ ಮೇಲವತರಿಸಿ
ಶಿವಶರಣ ತಿಂಥಿಣಿಯು ನಡೆದ ಮಾರ್ಗದಿ ಗಮಿಸಿ
ಸವಳಿಸಷ್ಟಾವರಣ ಪರಮ ಪಂಚಾಚಾರ ಷಟ್ಸ್ಥಲಂಗಳ ಬೋಧಿಸಿ।
ಭವಭವದಿ ಬಂದಿಳಿಗೆ ಬಹುವಾಗಿ ಬಳಲುತಿಹ
ಶಿವಭಕ್ತಸಂತತಿಯ ತ್ರೈಮಲವ ಕಳೆಯುತಿಹ
ಭವರೋಗ ಸದ್ವೈದ್ಯ ಶಿವಕುಮಾರೇಶಗೈಯೋ ಪ್ರಭುವರಾ||೨||

ವರವಿದ್ಯೆ ಕುಲವನಿತೆ ಸವೆಯದಾನಂದ ಸುತ
ವಿರತಿಯನುಕೂಲಜನ ಶಾಂತಿಸಖ ಮತಿಗೇಹ
ಪರಭಕ್ತಿ ಮಾತೆ ಸುಚರಿತಪಿತ ಕ್ಷಮೆಭೃತ್ಯನಾಚಾರ ಸುಕ್ಷೇತ್ರವು।
ಸಿರಿಗುವರಿ ಸತ್ಯ ದಾಸಿಯಹಿಂಸೆ ತೊತ್ತನಪ
ಹರಣ ಮೈತ್ರ್ಯಾದಿಪೌತ್ರರು ಧರ್ಮರಥನಂಬು
ಗೆ ರಹಸ್ಯಜನ ಮುಕ್ತಿದೇಶವರಿದೆ ಗುರುವಹ ಶಿವಕುಮಾರೇಶ
ಶರಣು ||೩||

ಕುಲಜಾತಿ ಮತವರ್ಣ ಯಾವುದನು ಲೆಕ್ಕಿಸದೆ
ದಲಿತ ಸೇವೆಯೆ ದೈವ ಸೇವೆಯೆಂಬುದ ತಿಳಿದು
ಬಲುಬಳಲಿ ಬಡತನದಿ ಬಳಿಸಾರ್ದ ಹಲವಾರು ದಶನೂರು ಮಕ್ಕಳುಗಳ।
ಒಲುಮೆಯಂ ಮೈದಡವಿ ವಸ್ತ್ರವೋದನವಿತ್ತು
ಸಲಿಗೆಯಿಂ ಸಂತೈಸಿ ವಿದ್ಯೆಬುದ್ಧಿಯ ಕಲಿಸಿ
ಸಲೆ ವಮದದಿ ಪೊರೆಯುತಿಹ ಕಾರುಣ್ಯ ಗುಣಸಿಂಧು ಕೃಪೆದೋರು
ದೀನಬಂಧು||೪||

ಮಾರಮರ್ದನರೂಪಿ ಮೃದುಮಧುರಸಲ್ಲಾಪಿ
ಸಾರಗುಣಸಂಪನ್ನ ಶರಣಸಂಕುಲರನ್ನ
ಪಾರಮಾರ್ಥ ಜ್ಞಾನ ಷಟ್ಸ್ಥಲಸುವಿಜ್ಞಾನಿ ಸುಜ್ಞಾನವರದಾನಿಯು।
ಚಾರುಮಂಗಳಮೂರ್ತಿ ಶಾಶ್ವತಾಮಲಕೀರ್ತಿ
ಕಾರುಣ್ಯಘನಶರಧಿ ವೈರಾಗ್ಯ ಪುಣ್ಯಸಿಧಿ
ವೀರಶೈವಾಚಾರನಿಷ್ಠ ಜಂಗಮಶ್ರೇಷ್ಠ ಶಿವಕುಮಾರೇಶಶರಣು ||೫||

ರವಿಯುದಯಕೇಳೆಂಟು ಘಳಿಗೆ ಮುನ್ನವೆ ಎದ್ದು
ಜವದಿಂದ ಶೌಚಾದಿಗಳ ಮುಗಿಸಿ ಮೌನದಿಂ
ತವೆ ಮಿಂದು ಮಡಿಯುಟ್ಟು ತಾದಾತ್ಮ್ಯದಿಂದಿಷ್ಟಲಿಂಗಾರ್ಚನೆಯ
ತೀರಿಸಿ
ಭುವಿಜನರ ಮಂಗಳ ಜಪತಪವನಾಚರಿಸಿ
ಕವಿಜನರ ಕಲ್ಪನೆಗೆ ಸಿಗದ ಶಿವನೊಳ್ಬೆರೆವ
ಶಿವಶರಣಕುಲತಿಲಕ ಶಿವಕುಮಾರೇಶ ವಿಭು ಶಿವಪಾದ ತೋರೋ
ಪ್ರಭು ||೬||

ಸ್ವಾಮಿಯಾದವರಾವ ನೇಮನಿಷ್ಠೆಯ ಹಿಡಿದು
ಪ್ರೇಮಪಥದಿಂ ನಡೆಯಬೇಕೆಂಬುದಂ ತೋರಿ
ಕಾಮಿಸದೆ ಕಾಮಿನೀಕಾಂಚನಂಗಳನುಳಿದು ವೈರಾಗ್ಯಮೂರ್ತಿಯೆನಿಸಿ।
ವ್ಯೋಮಕೇಶನ ಬೆರೆಯೆ ಹಗಲಿರುಳು ತಪಿಸುತಿಹ
ಕಾಮಾರಿಭಕ್ತಜನ ಹೃದಯದೊಳ್ನೆಲೆಸಿರ್ಪ
ಸೋಮಧರಸಮರೂಪ ಶಿವಕುಮಾರೇಶ ವಿಭು ಬಿಡದೆಮ್ಮ
ಕಾಯೋ ಪ್ರಭು ||೭||

ಮಿಸುನಿವಣ್ಣದ ಮೈಗೆ ಹಸನು ಕಾವಿಯ ಧರಿಸಿ
ಲಸಿತಭಸಿತವ ಪೂಸಿ ನೊಸಲ ಮೇಗೆ ಸಿಂಗರಿಸಿ
ಎಸೆವ ರುದ್ರಾಕ್ಷಿಯಿಂ ಕೊರಳನ್ನಲಂಕರಿಸಿ ವಿನಯದಿಂದನವರತವು।
ತುಸು ಬಾಗಿ ಶೋಭಿಸುವ ತಲೆಗೆ ಮುಂಡಾಸಿರಿಸಿ
ಮಸುಳಿಸದ ಸೂರ್ಯಸಮತೇಜದಿಂ ಕಂಗೊಳಿಪ
ಅಸಮಾಕ್ಷಸಮರೂಪ ಶಿವಕುಮಾರೇಶ ವಿಭು ಸದ್ಗತಿಯ ತೋರೊ
ಪ್ರಭು ||೮||

—ಪಿ. ಬಸವಣ್ಣ, ಕೊಳ್ಳೇಗಾಲ

(ಹಿಂದಿನ ಸಂಚಿಕೆಯಿಂದ ಮುಂದುವರಿದಿದೆ)

# ಮಹಾದೇವಿಯಕ್ಕನ ಮಹತಿ

ಡಾ॥ ಪಿ. ಚಂದ್ರಶೇಖರಾರಾಧ್ಯ
ಕನ್ನಡ ರೀಡರ್, ಕ.ವಿ.ವಿ. ಧಾರವಾಡ ಶಿಕ್ಷಣ ಕಾಲೇಜು,

ಎಸ್. ವಿ. ಪರಮೇಶ್ವರಭಟ್ಟರು ಹೇಳಿರುವಂತೆ "ಆ ಜೀವ ಕೇವಲ ಜೀವವಲ್ಲ ಜ್ಯೋತಿ ಎನ್ನಬೇಕು. ಆದೇಹ ಕೇವಲ ಧೇಹವಲ್ಲ ಹಣತೆ" ಎನ್ನಬೇಕು. ಆಕೆಯ ವಚನಗಳು ಅಣಿಮುತ್ತುಗಳು ಇವುಗಳಿಂದ "ಮಹಾದೇವಿಯಕ್ಕ ಹೆಂಗೂಸಾದರೂ ಆಕೆಯಲ್ಲಿ ಲೋಕಾನುಭವ ಜ್ಞಾನ, ಅಂತರಂಗದ ಅನುಭವಜ್ಞಾನ ಬಹಳ ಸೊಗಸಾಗಿ ಮಿಳಿತವಾಗಿದೆ. ಬಸವಣ್ಣಾದಿಗಳಲ್ಲಿ ಕೂಡ ಕಂಡುಬಾರದ ಅಪೂರ್ವ ಭಾವಗಳು ಕೆಲವು ಪ್ರತಿಭೆಯಲ್ಲಿ ಮಿಂಚುವುವು" ಎಂಬ ಸಂಗತಿ ಕಂಡುಬರುತ್ತದೆ.

ವೀರಶೈವರು ಲಿಂಗ ಧರಿಸದಿದ್ದವನನ್ನೂ 'ಭವಿ' ಎಂದು ರೂಢಿಯಲ್ಲಿ ಕರೆಯುತ್ತಾರೆ. ಆದರೆ ಆಕೆ 'ಭವಿ' ತನ್ನ ಹುಟ್ಟಿನಿಂದ ಬರುವುದಿಲ್ಲ. ವ್ಯಕ್ತಿಯ ಅಯೋಗ್ಯ ತನದಿಂದ ಬರುವುದು. ಭವಿ ಎಂದರೆ ಯಾರಾರು ಎಂಬುದನ್ನು ಸರಳವಾಗಿ ಎಲ್ಲರಿಗೂ ಸುಲಭ ಗ್ರಾಹ್ಯವಾಗುವಂತೆ.

"ಕಾಮ ಒಂದನೆಯ ಭವಿ, ಕ್ರೋಧ, ಎರಡನೆಯ ಭವಿ,
ಲೋಭ ಮೂರನೆಯ ಭವಿ, ಮೋಹ ನಾಲ್ಕನೆಯ ಭವಿ,
ಮದ ಐದನೆಯ ಭವಿ ಮತ್ಸರ ಆರನೆಯ ಭವಿ, ಆಮಿಷ ಏಳನೆಯ ಭವಿ,
ಇಂತೀ ' ಏಳು ಭವಿಗಳ ತನ್ನೊಳಗಿಟ್ಟುಕೊಂಡು,
ಲಿಂಗವಿಲ್ಲದವರ ಭವಿ, ಭವಿ, ಎಂಬರು
ತಮ್ಮಂತರಂಗದಲ್ಲಿದ್ದ ಲಿಂಗಾಂಗದ ಸುದ್ದಿಯನರಿಯದೆ"
ಅಚ್ಚ ಪ್ರಸಾದಿ ನಿಚ್ಚಪ್ರಸಾದಿ, ಸಮಯ ಪ್ರಸಾದಿಗಳೆಂದು
ಜಲಕ್ಕೆ ಕನ್ನವನಿಕ್ಕಿ ಉದಕದ ತಂದು ಲಿಂಗಕ್ಕೆ ಮಜ್ಜನಕ್ಕೆರೆದ
ಹಗಲುಗಳ್ಳರ ಮೆಚ್ಚುವನೇ ಚನ್ನಮಲ್ಲಿಕಾರ್ಜುನಾ"

ಎಂದು ತಿಳಿಸಿದ್ದಾಳೆ, ಶಿವಭಕ್ತರಾದವನು ಕಾಮಕ್ರೋಧಾದಿ ಅರಿಷಡ್ವರ್ಗಗಳನ್ನು ಗೆದ್ದಿರಬೇಕು. ಅಂದರೆ ಮಾತ್ರ ಅವನ 'ಭವಿ' ತನ ಅಳಿಯುತ್ತದೆ. ಎಂದು ತಿಳಿಸುವ ಈ ವಚನ ರಾಮಾನುಜಾಚಾರ್ಯರ ಆದರ್ಶ ಜೀವನದ ಕಥೆಯನ್ನು ನೆನಪಿಗೆ ತಂದುಕೊಡುತ್ತದೆ.

ಒಬ್ಬರ ಕಷ್ಟ ನೋವು ಇನ್ನೊಬ್ಬರಿಗೆ ಅನುಭವಿಸದೆ ಅರ್ಥವಾಗುವುದಿಲ್ಲ ಎಂಬ ವಿಚಾರವನ್ನು ದಿನನಿತ್ಯದ ಉದಾಹರಣೆಯಿಂದ ಸುಲಲಿತವಾಗಿ ಕೆಳಗಿನ ವಚನದಲ್ಲಿ ತಿಳಿಸಿದ್ದಾಳೆ.

"ಬಂಜೆ ಬೆನೆಯರಿಯಲು ಮಲತಾಯಿ ಮುದ್ದ ಬಲ್ಲಳೆ
ನೊಂದ ನೊಡವ ನೋಯದವರೆತ್ತ ಬಲ್ಲರು ಚನ್ನಮಲ್ಲಿಕಾರ್ಜುನ
ನೀನಿರದ ಅಲಗು ಒಡಲಲ್ಲಿ ಮುರಿದು ಹೊರಳುವಳ ........... 1

ಹೀಗೆ ಹೃದಯ ವೇದ್ಯವಾಗುವಂತೆ ರಚಿಸಿರುವ ಅಕ್ಕನ ವಚನಗಳು ಬಹುಹಿತ.

ಆಗಿನ ಕಾಲದಲ್ಲಿಯೂ 'ರತ್ನ' ವನ್ನು ರತ್ನವೆಂದು ಕಂಡುಕೊಳ್ಳಲಾಗದ ಬಹುಜನ ವಿದ್ದಿರಬೇಕು. ಒಳಿತಿನಲ್ಲಿಯೂ ಕೇಡುಕನ್ನೇ ಕಾಣುವ, ಅಕ್ಕನ ಔನ್ನತ್ಯವನ್ನು ಅರಿಯಲು ಅಸಮರ್ಥರಿಂದ ಅಸಂಖ್ಯಾತ ಮೂಢ ಜನ, ಪ್ರಾಯದಲ್ಲೇ ದಿಗಂಬರೆಯಾಗಿ. ಶಿವಶರಣರೊಡನೆ ಸೌಹಾರ್ದತೆಯಿಂದಿರುತ್ತಾ ಕಾಡು ಮೇಡೆಯನ್ನದೆ ಹಗಲು ರಾತ್ರಿ ಎನ್ನದೆ, ಭಯ ಮೋಹ ಸಂಕೋಚಗಳನ್ನೆಲ್ಲಾ ತೊರೆದು ವ್ಯವಹರಿಸುವುದನ್ನು ನೋಡಿ ತಮ್ಮ ಮಟ್ಟದಲ್ಲಿಯೇ ಆ ಮಹಿಮಳವನ್ನು ಅಳೆದಿರಬೇಕು. ಆಗ ಅಸಮಾನ್ಯ ವ್ಯಕ್ತಿಯಾದ ಅಕ್ಕ ಅದಕ್ಕಾಗಿ ದುಃಖಿಸದೆ ಅವರುಗಳ ವಿಚಾರಕ್ಕೆ ಬೆಲೆ ಕೊಡುವುದರಲ್ಲಿ ಅರ್ಥವಿಲ್ಲ ಎಂದುಕೊಂಡಿರಬಹುದು. ಏನೇ ಆದರೂ ಕೊಳಚೆ ಯನ್ನು ಬಿಟ್ಟು ಮೇಲೇಳಲಾರದ ಜನರ ಅಭಿಪ್ರಾಯಗಳಿಗೆ ಸಿಟ್ಟು ತೋರಿಸುವುದಕ್ಕಿಂತ ದುಃಖಪಡುವುದಕ್ಕಿಂತ, ಕೇಳಿಯೂ ಕೇಳದಂತೆ ಇರುವುದು ಮೇಲೆನ್ನಿಸಿ,

"ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಗಳಿಗಂಜಿದ
ಡೆಂತಯ್ಯ : ಸಮುದ್ರದಡಿಯಲ್ಲಿ ಮನೆಯ ಮಾಡಿ ನೊರೆತೆರೆಗಳಿಂಜಿದ
ಡೆಂತಯ್ಯ : ಸಂತೆಯೊಳಗೊಂದು ಮನೆಯ ಮಾಡಿ ಶಬ್ದಕ್ಕೆ ನಾಚಿ
ದಡೆಂತಯ್ಯ : ಚನ್ನಮಲ್ಲಿಕಾರ್ಜುನದೇವ ಕೇಳಯ್ಯ ಲೋಕದೊಳಗೆ
ಹುಟ್ಟಿದ ಬಳಿಕ ಸ್ತುತಿನಿಂದೆಗಳು ಬಂದಡೆ ಕೋಪದ ತಾಳದೆ
ಸಮಾದಾನಿಯಾಗಿರಬೇಕು. ಎಂಬ ವಚನವನ್ನು ರಚಿಸಬೇಕೆನ್ನಿಸುತ್ತದೆ

ಈ ವಚನ ಗೀತೆಯಲ್ಲಿರುವ "ಸುಖೇದುಃಖೇಸಮಾಕೃತ್ವಾಃ ಎಂಬ ನಿರ್ವಿಕಾರ ಮನೋಭಾವ ಬೆಳಸಿಕೊಳ್ಳಬೇಕೆಂಬ ತತ್ವವನ್ನು ನೆನಪಿಸುತ್ತದೆ. ಈಕೆಯ ಅರಿವು. ತನ್ನ ಅನುಭವಕ್ಕೆ ನಿಗಲಾದುದು : ವೈರಾಗ್ಯ. ವಯಸ್ಸಿಗೆ ಮೀರಿದುದು ಬಹುಶಃ ಕೌಶಿಕನು ಆಕೆಯ ದೇಹದ ಬಗ್ಗೆ ಮೋಹಗೊಂಡು ಅವನ ಕಾಮ ಪಿಪಾಸೆಗೆ ಜಿಗುಪ್ಸೆಗೊಂಡು ದೇಹದ ನಶ್ವರತೆ ಮತ್ತು ನ್ಯೂನತೆಗಳ ಬಗ್ಗೆ ವಿವರಿಸಿ ಇಂತಹ

ದೇಹದ ಬಗ್ಗೆ ಮೋಹಗೊಂಡು ಕೆಟ್ಟು ಹೋಗದೆ, ಪರಮಾತ್ಮನನ್ನು ಅರಿ
ಜೀವನ ಸಾರ್ಥಕ ಪಡಿಸಿಕೊ ಎಂದು ವಿವೇಕದ ಹಾದಿಯನ್ನು ಕೌಶಿಕನಿಗೆ ತೋರಿಸಲ

"ಅಮೇಧ್ಯದ ಹಡಿಕೆ. ಮೂತ್ರದ ಕುಡಿಕೆ. ಎಲುವಿನ ತಡಿಕೆ
ಕೀವಿನ ಹಡಿಕೆ ಸುಡಲೀ ದೇಹದ ಒಡಲವಿಡಿದು ಕೆಡಧಿರು
ಚನ್ನಮಲ್ಲಿ ಕಾರ್ಜುನನರಿ ಮರುಳೆ"

ಎಂಬ ವಚನದಿಂದ ಮಾರ್ಗದರ್ಶನ ಮಾಡಲು ಪ್ರಯತ್ನಿಸಿದಂತೆ ತೋರುತ್ತ
ಇದೆಲ್ಲಾ ನಿಜವಾದರೂಎಲ್ಲವೂ ತಿಳಿದಿದ್ದರೂ ಆ ಕೊಳಚೆಯಲ್ಲಿಯೇ ಹೊರಳಾಡು
ಜನರೇ ಹೆಚ್ಚು. ಈ ಮಾರ್ಗದರ್ಶನದಲ್ಲಿ ನಡೆಯುವ ಶಕ್ತಿ, ಈ ಉಪದೇಶವನ
ಪಾಲಿಸುವ ಯೋಗ್ಯತೆ ಎಷ್ಟರ ಮಂದಿಗೆ ತಾನೆ ಇದೆ? ಇದರಿಂದ ಎಲ್ಲರಿಗೂ ಅಕ್ಕನಾ
ಉಳಿಯುವ ಹಿರಿಯ ತನವನ್ನು ಪಡೆದಿದ್ದಾಳೆ ಈ ತಪಸ್ವಿನಿ.

ವಿರಾಗಿಣಿಯಾಗಿ ಹೊರಟನಂತರ ಅಕ್ಕನನ್ನೂ ಸಹ ಈ ಲೋಕಮಾಯೆ
ಆವರಿಸಲು ಹವಣಿಸಿರಬೇಕು. ಆಗ ಆ ಮಾಯೆಯನ್ನು ಗೆಲ್ಲುವ ಶಕ್ತಿಯನು
ಕರುಣಿಸೆಂದು ಬೇಡಿ ಆಕೆಯೂ ಬವಣೆಗೆಟ್ಟಿರಬಹುದೆಂದು ಕೆಳಗಿನ ವಚನದಿಂ
ಅನ್ನಿಸುತ್ತದೆ.

"ಹರಿಯ ನುಂಗಿತ್ತು ಮಾಯೆ ಅಜನ ನುಂಗಿತ್ತು ಮಾಯೆ ಇಂದ್ರನ ನುಂಗಿತ್ತೊ
ಮಾಯೆ ಚಂದ್ರನ ನುಂಗಿತ್ತೊ ಮಾಯೆ, ಬಲ್ಲೆನೆಂಬ ಬಲುಗೈಯರ
ನುಂಗಿತ್ತೊ ಮಾಯೆ, ಮಾಯೆ ಅರಿಯನೆಂಬ ಅಜ್ಞಾನಿಗಳ ನುಂಗಿತ್ತು
ಮಾಯೆ. ಈರೇಳು ಭುವನದನಾರಡಿಗೊಂಡಿತ್ತು ಮಾಯೆ
ಚನ್ನಮಲ್ಲಿಕಾರ್ಜುನಯ್ಯ ಎನ್ನಮಾಯೆ ಮಣಿಸಾಕರುಣಿ"

ಎಂದು ಮಾಯೆಯ ಪ್ರಬಲ ಪ್ರಭಾವ ಬಿಡಿಸಲು ಚನ್ನಮಲ್ಲಿಕಾರ್ಜುನಲ್ಲಿ ಮೊರೆ
ಹೊಕ್ಕಿದ್ದಾಳೆ. ಆದರೂ ಆ ಮಾಯೆ ಬಿಡದಿರಲು ತನ್ನ ಆತ್ಮಶಕ್ತಿಯ ಬಲವನ್ನು
ಕ್ರೋಢೀಕರಿಸಿ ನಿಗ್ರಹಶಕ್ತಿಯನ್ನು ಭಗವಂತನ ಕರುಣೆಯಿಂದ ಸಾಧಿಸಿಕೊಂಡು ಏನೇ
ಆದರೂ ಚನ್ನಮಲ್ಲಿಕಾರ್ಜುನಾಣೆಯಾಗಿಯೂ ಆ ಮಾಯೆಯ ಬಲೆಗೆ ಬೀಳುವುದಿಲ್ಲ
ಅದರ ಬೆದರಿಕೆಗೆ ಬೆದರುವುದಿಲ್ಲವೆಂಬ ತನ್ನ ದೃಢ ನಿಶ್ಚಯವನ್ನು ಸಾರಿದ್ದಾಳೆ.

" ಬಿಟ್ಟೆನೆಂದರೆ ಬಿಡದೀ ಮಾಯೆ. ಬಿಡದಿದ್ದರೆ ಬೆಂಬತ್ತಿತ್ತು
ಮಾಯೆ. ಯೋಗಿಗೆ ಯೋಗಿಣಿಯಾಗಿತ್ತಾ ಮಾಯೆ. ಸವಣಗೆ
ಸವಣಿಯಾಯಿತ್ತಾ ಮಾಯೆ: ಯತಿಗೆ ಪರಾಕಿಣಿಯಾಯಿತ್ತಾಮಾಯೆ
ನಿನ್ನ ಮಾಯೆಗೆ ನಾನಂಜುವವಳಲ್ಲ, ಚನ್ನಮಲ್ಲಿಕಾರ್ಜುನದೇವನಿಮ್ಮಾಣೆ.

ಹೀಗೆ ಪ್ರಾರಂಭದಲ್ಲಿ ಈ ಪ್ರಪಂಚದ ಆಶಾಪಾತಗಳಿಗೆ ಒಮ್ಮೊಮ್ಮೆ ಮನಹರಿದರೂ ಅದನ್ನು ಸ್ಥಿತಿಮಿತದಲ್ಲಿ ಕೊಂಡು ಸ್ಥಿರತೆಯನ್ನು ಕಂಡುಕೊಂಡಿದ್ದಾಳೆ. ಎಲ್ಲದರ ಬಗ್ಗೆ ನಿಜವಾದ ಅರಿವಾದಮೇಲೆ ಈ ಲೌಕಿಕ ವ್ಯವಹಾರಗಳಲ್ಲಿ ಅಲಿಪ್ತರಾಗಿ ಅರಿಷಡ್ವರ್ಗಗಳಿಗೆ ದಾಸರಾಗಿದ್ದರೂ ದೇವರನ್ನು ಸೃಷ್ಟಿಗೊಳಿಸಲು ವೇದ, ಶಾಸ್ತ್ರ ಪುರಾಣಗಳ ಮೂಲಕ ಪ್ರಯತ್ನಿಸುವವರನ್ನು ನೋಡಿ ಈಕೆಗೆ ಹುಚ್ಚುತನವನ್ನಿಸು ತ್ತದೆ. ಸುಲಭವಾಗಿ ದೇವನನ್ನೊಲಿಸುವ ಸರಳಮಾರ್ಗ ಬಿಟ್ಟು ಅರ್ಥಶೂನ್ಯಮಾರ್ಗ ಕ್ರಮಿಸುವುದನ್ನು ನೋಡಿ ಅವರ ಬಗೆಗೆ ಕನಿಕರಿಸಿ,

"ವೇದ ಶಾಸ್ತ್ರ ಪುರಾಣಾಗಮಗಳೆಲ್ಲ ಕೊಟ್ಟಣವ ಕುಟ್ಟುತ್ತ
ನುಚ್ಚು ತಾಡು ಕಾಣಿಭೋ : ಇವಕುಟ್ಟಲೇಕೆ ? ಅತ್ತಲಿತ್ತ
ಹರಿವ ಮನವ ಶಿವನನರಿದಡೆ ಬಚ್ಚಬರಿಯ ಬಯಲು ಚನ್ನಮಲ್ಲಿಕಾರ್ಜುನಾ"

ಎಂದು ಪಾಮರರಿಗೆ ನಿಜಮಾರ್ಗ ತೋರಿಸಿದ್ದಾಳೆ ಮಹಾದೇವಿ ಈ ಒಂದೇ ಸರಳ ವಚನದಲ್ಲಿ. ದೇವನೊಲು ಮೊಯ ಬಗ್ಗೆ ಬಸವಣ್ಣನವರು ಹೇಳಿರುವ ತತ್ವಗಳನ್ನೆಲ್ಲಾ ಸಂಗ್ರಹಿಸಿದ್ದಾಳೆ. ವಚನ ಸಾಹಿತ್ಯದಲ್ಲಿ ಅಕ್ಕನ ಪ್ರತಿಭೆಯನ್ನು ಆಗಿನ ಕಾಲದಲ್ಲಿಯೇ ಮಹಾಶರಣರಿಂದ ಚನ್ನಬಸವಣ್ಣನವರು

"ಆದ್ಯರ ಅರುವತ್ತ ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ
ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತು ವಚನ
ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಐದುವಚನ
ಅಜಗಣ್ಣನ ಐದು ವಚನಕ್ಕೆ ಚನ್ನಮಲ್ಲಿಕಾರ್ಜುನಯ್ಯ
ಮಹಾದೇವಿಯಕ್ಕಗಳ ಒಂದು ವಚನ ನಿರ್ವಚನಕಾಣ"

ಎಂದು ಕೊಂಡಾಡಿದ್ದಾರೆ. ಆಗಿನ ಕಾಲದಲ್ಲಿಯೇ ಶರಣರು ಆಕೆಯ ಮಹತಿಯನ್ನು ಅರಿತಿದ್ದರು. ಅಕ್ಕನು ಚಿಕ್ಕವಳಾದರೂ ಹಿರಿಯತನದ ಗೌರವಕ್ಕೆ ಪಾತ್ರಳೆಂದು ತಿಳಿದಿದ್ದರೆಂಬುವಕ್ಕೆ ಚನ್ನಬಸವಣ್ಣನವರ ಈ ಕೆಳಗಿನ ವಚನವೇ ಸಾಕ್ಷಿ.

ಅಜಕೋಟಿ ವರುಷದವರೆಲ್ಲರೂ ಹಿರಿಯರೇ ? ಹುತ್ತೇರಿ
ಬೆಳ್ಳಬೆಳದ ತಪಸ್ವಿಗಳೆಲ್ಲರೂ ಹಿರಿಯರೆ ? ನಡುಮುರಿದು
ಗುಡಗೂರಿ ತಲೆನಡುಗಿ ನರೆತೆರೆ ಹೆಚ್ಚಿ ಮತಿಗೆಟ್ಟು ಒಂದ ನಾಡುಹೋಗಿ
ಒಂಬತ್ತನಾಡುವ ಅಜ್ಞಾನಿಗಳೆಲ್ಲರೂ ಹಿರಿಯರೆ ? ಅನುವರಿದು
ಘನವ ತೀರಿಸಿ ಹಿರಿದು ಕಿರಿದೆಂಬ ಭೇದವ ಮರೆದು ಕೂಡಲ
ಚನ್ನಸಂಗಯ್ಯನಲ್ಲಿ ಬೆರೆಸಿ ಬೇರಿಲ್ಲದಿಪ್ಪ ಹಿರಿಯುನತನ ನಮ್ಮ
ಮಹಾದೇವಿಯಕ್ಕಂಗಾಯಿತ್ತು".

ಈ ವಚನವು ನಿಜಮಾರ್ಗವನರಿಯದೆ ವರ್ಷಾನುಗಟ್ಟಲೆ ತಪಸ್ಸು ಮಾಡಿದವರಿಗಿಂತಲೂ, ವಯಸ್ಸಿನಲ್ಲಿ ಕೂದಲು ಹಣ್ಣಾಗಿ ತಲೆ ನಡುಗುತ್ತಾ ನಡುಬಾಗಿರುವ ಅನೇಕ ಅಜ್ಞಾನಿ ವಯೋವೃದ್ಧರಿಗಿಂತಲೂ, ಜ್ಞಾನದಲ್ಲಿ ಹಣ್ಣಾದ ಅಕ್ಕಮಹಾದೇವಿಯೇ ಶಿವನಿಗೆ ಸಮಾನವಾದ ಹಿರಿಯತನ ಪಡೆದವಳು ಎಂದು ಸೂಚಿಸುತ್ತದೆ.

ಮಹಾದೇವಿಯಕ್ಕನು ಮಾನವ ಇತಿಹಾಸದಲ್ಲಿಯೇ ಅಪರೂಪವಾದ ಬಾಳನ್ನು ಬಾಳಿ ಅಮರಳಾಗಿದ್ದಾಳೆ. ಅಂದಿನವರಿಗೂ ಅಕ್ಕನಾದ ಅವಳು ಇಂದಿನವರಿಗೂ ಅಕ್ಕನಾಗಿದ್ದಾಳೆ. ಎಂದಿಗೂ ಅಕ್ಕನಾಗಿ ಉಳಿಯಬಲ್ಲವಳಾಗಿದ್ದಾಳೆ. ಅಕ್ಕಮಹಾದೇವಿಯಂತಹ ಪುಣ್ಯಜೀವಿ ಆಗಾಗ್ಗೆ ಹುಟ್ಟಲು ಸಾಧ್ಯವಿಲ್ಲ. ಒಮ್ಮೊಂದು ಅವತಾರದಿಂದ ಸಾವಿರಾರು ವರ್ಷಗಳವರೆಗೆ ಕೋಟ್ಯಂತರ ಜನರು ಪ್ರಭಾವಿತರಾಗಿ ಬೆಳಗಳಲು ಸಾಧ್ಯ. ಆಕೆಯ ಬದುಕು ಎಲ್ಲರ ಬಾಳಿಗೂ ಯಾವಾಗಲೂ ನಂದಾದೀವಿಗೆ, ಇಂತಹ "ಅಕ್ಕನ ಜೀವನ ಚರಿತ್ರೆಯನ್ನು ಅರಿಯುವುದು ಅವಳ ಪುಣ್ಯ ಸ್ಮರಣೆ ಮಾಡುವುದು ಮುಂದಿನ ಪೀಳಿಗೆಗೆ ಸುಲಿದ ಬಾಳೆಯ ಹಣ್ಣಿನಂದದಿ, ಕಳಿತ ಸಿಗುರಿನ ಕಬ್ಬಿನಂದದಿ" ಎಲ್ಲರಿಗೂ ಸುಲಭವಾಗಿಯೂ, ಸರಳವಾಗಿಯೂ ಇರುವ ತಿಳಿಗನ್ನಡದ ಆಡುಮಾತಿನಲ್ಲಿ ರಚಿತವಾಗಿರುವ ಅಕ್ಕನ ವಚನಗಳನ್ನೋದುವುದರಿಂದ ಒಂದಲ್ಲ ಒಂದು ರೀತಿಯಾಗಿ, ಒಮ್ಮೆಯಲ್ಲ ಒಮ್ಮೆ ಓದುಗರ ಮನಸ್ಸಿನಮೇಲೆ ಒಳ್ಳೆಯ ಪ್ರಭಾವ ಬೀರದೆ ಸಾಧ್ಯವಿಲ್ಲ. ಈಕೆಯ ಚರಿತ್ರೆ ಮನೆಮಾತಾಗಿ ಮನೆ ಮನೆಯನ್ನು, ಮನ ಮನವನ್ನು ಬೆಳಗಿಸಲಿ.




## ಮೆ|| ಒರಿಯಂಟಲ್ ಲೆದರ್ಸ್

ಬಿ. ಟಿ. ಎಸ್. ರಸ್ತೆ, ವಿಲ್ಸನ್ ಗಾರ್ಡನ್, ಬೆಂಗಳೂರು.

ಮಾಲೀಕರು :- **ಬಿ. ಜಿ. ಉದೈ**

ಅಪ್ಪಟ ಚರ್ಮದಿಂದ ಮಾಡಿದ ಉತ್ತಮಗುಣಮಟ್ಟದ ದಿನ ಬಳಕೆಯ ಚರ್ಮದ ವಸ್ತುಗಳ ತಯಾರಕರು.

**ಒಮ್ಮೆ ಭೇಟಿ ಕೊಡಿ !**

( ಹಿಂದಿನ ಸಂಚಿಕೆಯಿಂದ ಮುಂದುವರಿದಿದೆ)

# ಶೈವಧರ್ಮದ ಹಿನ್ನಲೆ

-ವಿದ್ಯಾಲಂಕಾರ ಪ್ರೊ|| ಎಸ್.ಕೆ. ರಾಮಚಂದ್ರರಾವ್

ಶಿವ-ಶಕ್ತಿಗಳೆರಡೂ ಕೂಡಿಕೊಂಡು ಶಕ್ತಿಯ ಭಾಗಕ್ಕಿಂತ ಶಿವನ ಭಾಗ, ಎಂದರೆ ರುದ್ರನಿಗಿಂತ ಶಿವ, ಹೆಚ್ಚಾದರೆ, ಅದು ಲಿಂಗವಾಯಿತು. ಲಿಂಗದ ರಚನೆಯಲ್ಲಿ ಶಕ್ತಿಯನ್ನು ಅಳವಡಿಸಿರುವುದು, ಶಿವಭಾಗವು ಮೇಲೆದ್ದು ನಿಂತಂತೆ ಕಾಣಿಸುವುದು. ಈ ತಾತ್ಪರ್ಯದಲ್ಲಿಯೇ. ಲಿಂಗಪುರಾಣವು '**ಲಿಂಗವೇದೀ ಮಹಾದೇವಿ ಲಿಂಗಂ ಸಾಕ್ಷಾನ್ಮಹೇಶ್ವರಃ**' ಎಂದಿರುವುದನ್ನು ಗಮನಿಸಬೇಕು. ಶಿವನನ್ನು ಪ್ರಕಾಶ (ಬ್ರಹ್ಮ) ಎಂದೂ ಶಕ್ತಿಯನ್ನು ವಿಮರ್ಶಾ (ಮಾಯಾ) ಎಂದೂ ಶೈವ ತಂತ್ರಗಳು ವಿವರಿಸುತ್ತವೆಯಷ್ಟೆ. ಶಕ್ತಿಯ ಬಿಂಬವು ಲಿಂಗವನ್ನು ಕೈಯಲ್ಲಿಯೋ ತಲೆಯ ಮೇಲೋ ಧರಿಸಿರುವಂತೆ ಶಿಲ್ಪಗಳಿವೆ. ಚಂಡೀಮಹಾತ್ಮೆಯ ಒಕ್ಕಣೆಯಂತೆ ಮಹಾಲಕ್ಷ್ಮಿಯ ಮೂರ್ತಿಲಕ್ಷಣ-

'ಮಾತುಲಿಂಗಂ ಗದಾಂ ಖೇಟಂ ಪಾನಪಾತ್ರಂಚ ಬಿಭ್ರತೀ |
ನಾಗಂ ಲಿಂಗಂ ಚ ಯೋನಿಂ ಚ ಬಿಭ್ರತೀ ನೃಪ ಮೂರ್ಧನಿ ||

ಇಲ್ಲಿಲ್ಲ ಸೂಚಿತವಾಗುವ ಶಕ್ತಿಯಲ್ಲಿಯೇ ಶಿವ ಇರುವವನಾದರೂ ಶಕ್ತಿಗಿಂತ ಶಿವನ ಆಧ್ಯಾತ್ಮಿಕ ಮೇಲ್ಮೆ, ಭಗವದ್ಗೀತೆಯು ರುದ್ರಾಣಾಂಶಂಕರಶ್ಚಾಸ್ಮಿ' ಎನ್ನುವಾಗಲೂ ಇದೇ ಧ್ವನಿಯಿದೆ. ಊರ್ಧ್ವಲಿಂಗವೆಂಬುದು ಈ ಮೇಲ್ಮೆಯನ್ನು ಸಾಂಕೇತಿಕವಾಗಿ ಕಾಣಿಸುವ ಕುರುಹಷ್ಟೆ. ಮಹಾಭಾರತದಲ್ಲಿ ರುದ್ರನ ಹೆಚ್ಚಳವನ್ನು ಮರೆತು ಶಿವನ ಆಧಿಕ್ಯವನ್ನು ಎತ್ತಿ ಹೇಳುವ ಪ್ರಸಂಗವೊಂದು ಬರುತ್ತದೆ. (ಶಾಂತಿ ಪರ್ವದಲ್ಲಿ). ನೆರೆದ ದೇವತೆಗಳ, ಋಷಿಗಳ ಸಭೆಯಲ್ಲಿ ದಧೀಚಿಯು ಶಿವನ ಮೇಲ್ಮೆಯನ್ನು ಸಾರುತ್ತಾನೆ. ಆಗ ದಕ್ಷನು-

'ಸಂತಿನೋ ಬಹವೋ ರುದ್ರಾಃ ಶೂಲಹಸ್ತಾಃ ಕಪರ್ದಿನಃ |
ಏಕಾದಶಸ್ಥಾನಗತಾ ನಾಹಂ ವೇದ್ಮಿ ಮಹೇಶ್ವರಂ ||'

ಎನ್ನುತ್ತಾನೆ. ಶೂಲವನ್ನು ಕೈಯಲ್ಲಿ ಹಿಡಿದು, ಜಡೆಯನ್ನು ಎತ್ತಿಕಟ್ಟಿ ಅಡ್ಡಾಡುವ ರುದ್ರರು ಅನೇಕ ಮಂದಿ ಅವನಿಗೆ ಪರಿಚಿತರು; ಆದರೆ ಸೌಮ್ಯವಾದ ಶಿವನನ್ನು ದಕ್ಷ ಅರಿತಿರಲಿಲ್ಲ. ಆಗಿನ್ನೂ ಅವನ ಹಿರಿಮೆ ಮೊಗ್ಗೊಡೆಯುತ್ತಿದ್ದಿತು.

ಶಿವನನ್ನು ಅವ್ಯಕ್ತವೆಂದು ಶಕ್ತಿಯನ್ನು ವ್ಯಕ್ತವೆಂದೂ ಭಾವಿಸುವುದು ನಾಥ ಸಂಪ್ರದಾಯದಲ್ಲಿಯೂ, ಶೈವಸಿದ್ಧಾಂತದಲ್ಲಿಯೂ, ಬರುವ ವಿವರ ಶಿವಶಕ್ತಿಯರು ಕೂಡಿರುವ ಲಿಂಗ ವ್ಯಕ್ತಾವ್ಯಕ್ತವಾದುದು. ವ್ಯಕ್ತವಾದ ಶಕ್ತಿಯನ್ನೇ ಅಧಿಕರಿಸಿ ನಿರೂಪಿಸುವುದಾದರೆ ಸ್ತ್ರೀಯಂತೆ ಕಾಣಿಸುವುದು ವಾಡಿಕೆ. ಸೈಂಧವ ಸಂಸ್ಕೃತಿಯ ಅವಶೇಷಗಳಲ್ಲಿ ಮಾತೃದೇವತೆಯರ ಶಿಲ್ಪ ಚಿತ್ರಗಳವೆ. ಸೈಂಧವ ಸಂಸ್ಕೃತಿಯು ಬಹುಮಟ್ಟಿಗೆ ನಾಗರಸಂಸ್ಕೃತಿ ಅದಕ್ಕೂ ಮುಂಚೆ ಗ್ರಾಮೀಣಸಂಸ್ಕೃತಿಯೊಂದು ಅಲ್ಲಲ್ಲ ಹರಡಿದ್ದುದು ಬಲೂಚಿಸ್ಥಾನದ ಕುಲ್ಲಿ ಮತ್ತು ಜ್ಹೋಬ್‌ಕಣಿವೆಗಳ ಅವಶೇಷಗಳಿಂದ ತಿಳಿದು ಬರುತ್ತದೆ. ಕುಲ್ಲಿಯಲ್ಲಿನ ಮಣ್ಮಯ ಪ್ರತಿಮೆಗಳು ಶಕ್ತಿಯ ಸೌಮ್ಯ ರೂಪವನ್ನೂ ಜ್ಹೋಬ್ ಪ್ರತಿಮೆಗಳು ಉಗ್ರರೂಪವನ್ನೂ ತಳೆದಿರುವುದು ಸ್ವಾರಸ್ಯವಾಗಿದೆ. ಮುಂದೆ ಶಕ್ತಿಯ ಕಲ್ಪನೆಯಲ್ಲಿ ಗೌರೀ-ಕಾಳೀ ಎಂಬ ಎರಡು ರೂಪಗಳು ಮೈದಳೆಯಲು ಕುಲ್ಲಿ ಮತ್ತು ಜ್ಹೋಬ್ ಪ್ರತಿಮೆಗಳೇ ಕಾರಣವಾದುವೆನ್ನಬಹುದು, ರುದ್ರ–ಶಿವರ ಸ್ವಭಾವದಲ್ಲಿ ಭೇದವಿದ್ದಂತೆಯೇ ಇಲ್ಲಿಯೂ ಒದಗಿತು.

ಅಥರ್ವವೇದದಲ್ಲಿ ಬರುವ ವ್ರಾತ್ಯಕಾಂಡವು (೧೫.೫) ವ್ರಾತ್ಯರೆಂಬ ಜನರನ್ನು ಕುರಿತಿದ್ದು ವ್ರಾತ್ಯರು ಸೈಂಧವ ಸಂಸ್ಕೃತಿಯ ಸಮಯದಲ್ಲೇ ಇದ್ದವರೆಂದು ಒಂದು ಊಹೆಯಿದೆ ( ದೇವದತ್ತ ರಾಮಕೃಷ್ಣ ಭಂಡಾರಕರರು ). ಅವರು ಯೋಗಿಗಳ ಪೂರ್ವಜರೆಂದೂ ಹೇಳುತ್ತಾರೆ ( j.w. ಹಾವುರ್ ), ವ್ರತಗೆಟ್ಟವರು ವ್ರಾತ್ಯರಾದರೆಂದು ಕೆಲವರ ( ಹರಿಪ್ರಸಾದ ಶಾಸ್ತ್ರಿ ) ವಾದವಾದರೂ, ಸಂಸ್ಕಾರಹೀನರು ವ್ರಾತ್ಯರೆಂದು ಆನಂದಗಿರಿಯ ಒಕ್ಕಣೆಯಾದರೂ ( ಸಂಸ್ಕಾರಹೀನೋ ವ್ರಾತ್ಯ ಇತಿ) ಅವರು ಸಂಘಜೀವಿಗಳೆಂದೂ ಮಾತು, ಮಂತ್ರ, ತಂತ್ರಗಳಲ್ಲಿ ಚತುರರೆಂದೂ ತಿಳಿದು ಬರುತ್ತದೆ. ತಾಂಡ್ಯ ಮಹಾಬ್ರಾಹ್ಮಣದಲ್ಲಿ ಇವರನ್ನು ಹೀನ, ನಿಂದಿತಗಳೆಂಬ ಪಂಗಡಗಳಲ್ಲದೆ ಗಿರಾಗಿರ ( ವಿಷುವನ್ನುಣ್ಣುವರು, ಎಂದರೆ ಉಗ್ರವಾದ ಬಾಳನ್ನು ನಡೆಸುವವರು ) ಮತ್ತು ಸಮನೀಚಮೇಢ್ರ ( ಎಂದರೆ ಇಂದ್ರಿಯನಿಗ್ರಹದಿಂದ ಯೋಗಿಗಳಾದವರು ) ಎಂದು ವಿಭಾಗಗಳಲ್ಲಿಯೂ ಕಾಣಿಸುತ್ತದೆ. ಇವರ ಬಾಳುವ ಗುಂಪಿನಲ್ಲೇ ಇರುತ್ತಿದ್ದು, ಉಗ್ರವಾಗಿರುತ್ತಿದ್ದರೆಂದು ಪತಂಜಲಿ ಸೂಚಿಸಿದ್ದಾನೆ. (ಉತ್ಸೇಧಥಜೀವಿನಃ ಸಂಘಾ ವ್ರಾತಾಃ....ವ್ರಾತಾಕರ್ಮಣಾ ಜೀವತೇತಿ ವ್ರಾತಿನಃ ). ಇವರ ಬಗ್ಗೆ ಶಿಷ್ಟರೆಂದುಕೊಂಡವರ ಟೀಕೆ ಏನೇ ಇರಲಿ, ಇವರು ಪ್ರಭಾವ ಶಾಲಿಗಳಾಗಿದ್ದವರೆನ್ನುವುದರಲ್ಲಿ ಸಂಶಯವಿಲ್ಲ. ಶಿವನನ್ನು ಏಕವ್ರಾತ್ಯನೆಂದು ಕರೆದು ಸ್ಕಂಭಕ್ಕೂ ಲಿಂಗಕ್ಕೂ ತಾದಾತ್ಮ್ಯವನ್ನು ಕಲ್ಪಿಸಿರುವುದನ್ನು ಋಗ್ವೇದದ ಮಂತ್ರಗಳಲ್ಲಿಯೇ ಕಾಣುತ್ತವೆ. ಅಥರ್ವವೇದವು **ಸ್ಕಂಭೋ ದಾಧಾರ ದ್ಯಾವಾಪೃಥಿವೀ** ಎನ್ನುವಲ್ಲಿ ಏಕವ್ರಾತ್ಯನಾದ ಶಿವನ ಅಗ್ಗಣಿಕೆಯೇ ಇರುವುದು.

ಸೈಂಧವ ಸಂಸ್ಕೃತಿಯ ಅವಶೇಷಗಳಲ್ಲಿ ಮೊಹೆನ್‌ಜೊದಾರೊವಿನಲ್ಲಿ ದೊರೆತ 'ಪಶುಪತಿ-ಶಿವ' ನೆನ್ನುವ ದೇವತೆಯ ಮುದ್ರಿಕೆ ಪ್ರಸಿದ್ಧವಾಗಿದೆ. ಇವನು ತ್ರಿಮುಖ ಮಹಾದೇವನೆಂದೂ ಶಿವನ ಪೂರ್ವರೂಪವೆಂದೂ ಕೆಲವರು (ಆರ್. ಎನ್ ದಾಂಡೇಕರರು ಇತ್ಯಾದಿ) ಪರಿಗಣಿಸಿದರೆ ಋಗ್ವೇದದಲ್ಲಿ (೧೦, ೮, ೯) ಬರುವ ತ್ವಾಷ್ಟ್ರ ವಿಶ್ವರೂಪನೆಂದೂ (ಎಸ್. ಶ್ರೀಕಂಠಶಾಸ್ತ್ರಿಗಳು) ಅಗ್ನಿಯೆಂದೂ (ಬಿ. ಎ. ಸಾಲೆತ್ತೂರರು) ಕು. ಎಜಸ್. ಎಂಬ ಉಗ್ರದೇವತೆ ಎಂದೂ (ಹ್ರೋಜ್ನಿ), ಆಣ್ ಎಂಬ ಗಂಡು ದೈವವೆಂದೂ (ಹೆರಾಸರು) ಮಹಿಷಾಸುರ- ದುರ್ಗೆ ಯೆಂದೂ ಬಗೆಬಗೆಯಾಗಿ ನಿರ್ದೇಶಿಸಿದ್ದಾರೆ. ಮೂರು ಮುಖಗಳೇನೋ ಈ ದೇವತೆಗೆ ತಲೆಯಮೇಲೆ ಇಕ್ಕೋಡಿನಂಥ ಆಭರಣವಿದೆ. ಇದೇನು ಶೂಲದ ಮೂಲರೂಪವೋ, ಕಿರೀಟದ ಸಂಕೇತವೋ, ಜಟಾ ಶಿಖಂಡವೋ, ಅಥವಾ ಎಮ್ಮೆಯ ಕೋಡುಗಳೋ ಸ್ಪಷ್ಟವಾಗುವುದಿಲ್ಲ; ವಿಷಾಣಿಗಳೆಂಬ ನಿರ್ದೇಶನ ಶಿವಾಸ-ಜನರಿಗಿದ್ದುದಕ್ಕೆ ಋಗ್ವೇದದಲ್ಲಿನೋ ಪ್ರಸ್ತಾಪವಿದೆ; ವಿಷಾಣಿಗಳೆಂದರೆ ಕೋಡನ್ನು ಕಟ್ಟಿಕೊಂಡವರು। ಮೂರ್ತಿ ಬೆತ್ತಲೆಯಿರುವಂತಿದೆ ; ಕೈಕಾಲುಗಳ ಯೋಗಮುದ್ರೆಯಲ್ಲಿವೆ. ಎದೆಯ ಮೇಲೆ ತ್ರಿಕೋಣಾಕಾರದ ಕವಚವಿದೆ. ಈ ಮೂರ್ತಿಯ ಸುತ್ತ ಪಶುಗಳು ( ಆನೆ. ಹುಲಿ, ಎಮ್ಮೆ ಖಡ್ಗಮೃಗ, ಆಸನದ ಕೆಳಗೆ ಜಿಂಕೆಗಳು ) ಇರುವುದರಿಂದ ಇದನ್ನು **ಪಶುಪತಿ** ಯೆಂದರು, ಮೂರ್ತಿ ನಿರ್ದೇಶನ ಏನಾದರೂ ಇರಲಿ, ಮೂರ್ತಿಯು ಕುಳಿತಿರುವ ಆಸನ ಸ್ವಾರಸ್ಯವಾದ ವಿವರ. ವ್ರಾತ್ಯರಿಗೆ ವಿಶಿಷ್ಟವಾದ ಆಸಂದಿಯೆಂಬ ಆಸನವೆಂದು ಆರ್.ಎನ್. ದಾಂಡೇಕರರು ಅಭಿಪ್ರಾಯಪಡುತ್ತಾರೆ. ಇದು ಏಕವ್ರಾತ್ಯನ ಪ್ರಾಚೀನ ಚಿತ್ರಣವೇ? ಮೂರ್ತಿಯಲ್ಲಿ ಕಾಣುತ್ತದೆಯೆನ್ನುವ ಬೃಹಚ್ಛೇಪವು ಊರ್ಧ್ವಲಿಂಗವನ್ನು ಹೇಳುವುದೋ, ವ್ರಾತ್ಯರಲ್ಲಿ ಒಂದು ಪಂಗಡವಾದ ಸಮನೀಚಮೇಢ್ರರನ್ನು ಸೂಚಿಸುವುದೋ ? ಇದೇ ಮುದ್ರಿಕೆಯಲ್ಲಿ ಆರೇಳು ಅಕ್ಷರಗಳ ಬರಹವಿದೆ. ಇದನ್ನು ಓದಲಾಗುವವರೆಗೆ ಚಿತ್ರಣದ ನಿರ್ದೇಶನ ಸಂದಿಗ್ಧವಾಗಿಯೇ ಉಳಿಯುತ್ತದೆ. ಆದರೆ ಪತಂಜಲಿಯು **ಉತ್ಸೆಧೀವ ಜೀವಿಗಳೆಂದು** ಬಣ್ಣಿಸಬಲ್ಲ ಜನರು ಸೈಂಧವಸಂಸ್ಕೃತಿಯ ಹಲವು ಮುದ್ರಿಕೆಗಳಲ್ಲಿ ಕಾಣಿಸಿಕೊಳ್ಳುತ್ತಾರೆ.

ಶಕ್ತಿಯನ್ನು ಶಿವನಿಂದ ಬೇರ್ಪಡಿಸಿ ಚಿತ್ರಿಸಿಕೊಳ್ಳುವ ಅಗತ್ಯವೊದಗಿದಾಗ ವೃಷಭವು ಶಕ್ತಿಯನ್ನು ಸೂಚಿಸುವ ಸಾಧನವಾಯಿತು. ಸೈಂಧವಸಂಸ್ಕೃತಿಯಲ್ಲೂ ಅದನ್ನೂ ಮುಂಚಿನ ಕುಲ್ಲಿ, ಜ್ಹೋಬ್, ಮುಖ್ರನ್, ರೂಪರ್ ಮೊದಲಾಡೆಡೆ ಕಾಣುವ ಸಂಸ್ಕೃತಿಯಲ್ಲೂ ಬಸವ ಚಿತ್ರಣ ಮುದ್ರಿಕೆಗಳ ಮೇಲೆ ಮತ್ತೆ ಮತ್ತೆ ಬರುತ್ತದೆ. ಕುಲ್ಲಿಯ ಅವಶೇಷಗಳಲ್ಲಿ ಮಣ್ಣಿನ ಮಡಕೆಗಳ ಮೇಲೆ ಬಸವನ ಚಿತ್ರಗಳನ್ನು ಬಣ್ಣಗಲ್ಲಿ ಬಿಡಿಸಿರುವುದಿದೆ; ಸುಟ್ಟ ಮಣ್ಣಿನ ಮೂರ್ತಿಗಳೂ ಇವೆ. ಎರಡರಲ್ಲೂ ನೈಜ ಚಿತ್ರಣಕ್ಕಿಂತ ಸಾಂಕೇತಿಕವಾದ ಕಳೆಯೇ ಹೆಚ್ಚಾಗಿದೆಯೆಂದು ಗಮನಿಸಿ

ಬಹುದು. ಸೈಂಧವಸಂಸ್ಕೃತಿಯ ಮುದ್ರಿಕೆಗಳಲ್ಲಿ ಕಾಣುವ ಬಸವಗಳು ವಾಸ್ತವಿಕತೆಯ ಛಾಯೆಯನ್ನು ಹೆಚ್ಚಾಗಿ ತಳೆದಿವೆಯನ್ನಿ. ಆದರೆ ಕುಲ್ಲಿಯ ಬಸವಗಳಲ್ಲಿ ಡುಬ್ಬು ಎದ್ದು ಕಾಣುತ್ತದೆ. ಸೈಂಧವ ಬಸವಗಳಲ್ಲಿಯೂ ಡುಬ್ಬು ಇರುವುದಾದರೆ, ಡುಬ್ಬು ಬಸವಗಳೂ ಇವೆ ಬಸವ ಶಕ್ತಿಯ ಸಂಕೇತವೆನ್ನುವುದು ಪ್ರಪಂಚದ ಎಲ್ಲ ಪ್ರಾಚೀನ ಜನರಲ್ಲಿಯೂ ಪ್ರಚಲಿತವಾಗಿರುವ ಕಲ್ಪನೆಯೇ; ಇಂದಿಗೂ ಅದೇ ಭಾವನೆಯಿರುವುದನ್ನು ಗಮನಿಸಬಹುದು. ಬಸವ ಗಂಡಾದರೂ ಅದು ಪ್ರತಿನಿಧಿಸುವುದು ಶಕ್ತಿಯನ್ನು, ಸ್ತ್ರೀತತ್ವವನ್ನು, ಆದರೆ ಡುಬ್ಬು ಶಿವನ ಮೂಲಾಕೃತಿಯೇ ಶಕ್ತಿಯಲ್ಲಿ ಶಿವನನ್ನು ಕಾಣಿಸುವ ಹವ್ಯಾಸ ಇಲ್ಲಿ ಕಾಣಸಿಗುವುದೆ ?

ವೃಷಭದ ಹಿರಿಮೆ ವೈದಿಕ ಸಾಹಿತ್ಯದಲ್ಲೇನೋ ಬೇಕಾದಷ್ಟು ದೊರೆಯುತ್ತದೆ. ಇಂದ್ರನನ್ನೂ ಹಲವಾರು ಇತರ ದೇವತೆಗಳನ್ನೂ ವೃಷಭರೆಂದು ಕರೆದಿರುವುದುಂಟು, ರುದ್ರನನ್ನೂ ವೃಷಭನೆಂದೇ ಕರೆದಿರುವುದಿದೆ. (ಋಗ್ವೇದ ೨, ೩೩, ೭). ತಾಂಡ್ಯ ಮಹಾಬ್ರಾಹ್ಮಣದಲ್ಲಿ (೬, ೯, ೭) ರುದ್ರನು ಮಹಾದೇವನಾಗಿ ಗೋವುಗಳನ್ನು ಕೊಲ್ಲುವನೆಂದು ಹೇಳಿರುವುದು ಸ್ವಾರಸ್ಯವಾಗಿದೆ. ಆವನು ಆಕಾಶದಲ್ಲಿ ಕೆಂಬಣ್ಣದ ವರಾಹನಾಗಿಯೂ ಕಾಣಿಸಿಕೊಳ್ಳುವನಂತೆ(ಋಗ್ವೇದ ೧, ೧೧೪, ೫). ಹೀಗೆ ವರಾಹ ವೃಷಭನೆನ್ನುವ ವರ್ಣನೆ ರುದ್ರನ ಬಲವನ್ನೂ ಪರಾಕ್ರಮವನ್ನೂ, ಘೋರ ಕರ್ಮವನ್ನೂ ಎತ್ತಿ ಹೇಳುತ್ತದೆ ರುದ್ರ–ಶಿವರ ದ್ವೈಭಾವನೆ ಬಳಕೆಯಲ್ಲಿದ್ದಾಗ ರುದ್ರನನ್ನು ಬಸವನೆಂದು ಕಾಣಿಸಿ, ಶಿವನನ್ನು ಮನುಷ್ಯಾಕೃತಿಯಲ್ಲಿ ಕಾಣಿಸುತ್ತಿದ್ದರೆಂದು ತೋರುತ್ತದೆ. ಸೈಂಧವ ಸಂಸ್ಕೃತಿಯ ಮುದ್ರಿಕೆಗಳಲ್ಲಿ ಇದನ್ನು ಕಾಣಬಹುದು; ವೈದಿಕ ಸಾಹಿತ್ಯದಲ್ಲಿ ಇದರ ಸಮರ್ಥನೆ ದೊರೆಯುತ್ತದೆ. ಕ್ರಿಸ್ತಾಬ್ದ ಹಿಂದೆ ಮುಂದೆ ನಾಣ್ಯಗಳಲ್ಲಿ ಶಿವನೊಂದಿಗೆ ಬಸವನನ್ನು ಚಿತ್ರಿಸಿರುವುದನ್ನು ಕಾಣಬಹುದು. ಕುಷಾಣರಾಜವೇಮ–ಕಾಡ್‌ಫಿಸಸ್‌ನ ಒಂದು ಬಂಗಾರದ ನಾಣ್ಯದ ಮೇಲೆ ಎರಡು ಕೈಗಳ ಶಿವನ ಪಕ್ಕದಲ್ಲಿ ಬಸವವಿದೆ, 'ಮಹೇಶ್ವರ' ನೆಂಬ ಬರಹವೂ ಇದೆ. ಕುಷಾಣರ ನಾಣ್ಯಗಳಲ್ಲಿ ಬಸವನ ಚಿತ್ರಣ ವಿಶೇಷವಾಗಿದೆ ಮಿಹಿರ ಕುಲನ ಒಂದು ನಾಣ್ಯ(ಕ್ರಿಸ್ತಾಬ್ದ ೫೧೫ ರ ಸುಮಾರಿನದು) 'ಜಯತು ವೃಷಃ' ಎಂಬ ಬರಹವನ್ನೂ ಕಾಣಿಸುತ್ತದೆ. ಯವನರು ಶೈವ ಧರ್ಮವನ್ನು ಪರಿಗ್ರಹಿಸಿದಾಗ ಬಸವ ಲಾಂಛನ ಅವರಿಗೆ ಪ್ರಿಯವಾಯಿತೆಂದು ತೋರುತ್ತದೆ ಗಂಧಾರದಲ್ಲಿ ದೊರೆತ ಇಂಟೋಸಿಥಿಯನ್ ದೊರೆಯೊಬ್ಬನ ನಾಣ್ಯದ ಮೇಲೆ ಒಂದು ಕಡೆ ಬಸವನ ಚಿತ್ರವಿದ್ದು ಗ್ರೀಕ್ ಲಿಪಿಯಲ್ಲಿ 'ತವುರೋಸ್' ಎಂದೂ ಖರೋಷ್ಠಿಯಲ್ಲಿ 'ಉಷುಭ' ಎಂದೂ ಬರಹಗಳಿವೆ: ಇನ್ನೊಂದು ಕಡೆ ಹೆಣ್ಣು ದೇವತೆಯೊಬ್ಬಳ ಚಿತ್ರಣವಿದ್ದು ಖರೋಷ್ಠಿಯಲ್ಲಿ 'ಪಬಲವತಿ ದೇವತಾ' (ಎಂದರೆ ಪುಷ್ಕಲಾವತಿ ನಗರದ ದೇವತೆ, ಗಂಧಾರದೇಶದ ರಾಜಧಾನಿಯಾಗಿದ್ದುದು ಪುಷ್ಕಲಾವತಿ) ಎಂದು ಲೇಖವಿದೆ.

ಬಸವನು ರುದ್ರರೂಪಿಯಾಗಿ, ಮಾನುಷಮೂರ್ತಿಯು ಶಿವರೂಪಿಯಾದರೆ ಇಲ್ಲಿ ಶಿವನನ್ನು ಸ್ತ್ರೀಯೆಂದು ಕಾಣಿಸಿರಬಹುದೆ? ಶೂಲವನ್ನು ಹಿಡಿದು ನಿಂತ ಗಂಡಸು ಶಿವನನ್ನು ಪ್ರತಿನಿಧಿಸುವಂತೆ ಕುಷಾಣನಾಣ್ಯಗಳಲ್ಲಿ ಕಂಡುಬಂದಾಗ ಶಿವನು ಸೌಮನೇ, ಕುಷಾಣ ಮತ್ತು ಯುವನ ಶಿಲ್ಪಿಗಳು ಶಿವನನ್ನು ಹೆಂಗಸು-ಗಂಡಸು (ಅರ್ಧನಾರೀಶ್ವರ) ಎಂದು ಚಿತ್ರಿಸುತ್ತಿದ್ದುದನ್ನು ಡಾ|| ಆನಂದಕುಮಾರಸ್ವಾಮಿಯ-ವರು ಪ್ರಸ್ತಾಪಿಸಿದ್ದಾರೆ. ಮೌಖರಿವಂಶದ ಅರಸರ ಕಾಲಕ್ಕೆ ಅರ್ಧನಾರೀಶ್ವರನ ಅಥವಾ ಅರ್ಧಯುವತೀಶ್ವರ) ಪ್ರತಿಮೆಗಳು ಬಳಕೆ ಬಂದುವು. **ದ್ವೈತನೂ** ಎನ್ನುವ ಹಳೆಯ ನಿರೂಪಣೆಗೆ ಮೂರ್ತಿಶಿಲ್ಪದಲ್ಲಿ 'ದೇಹಾರ್ಧಘಟನೆ' ಯನ್ನು ಮಾಡಿದು-ದನ್ನು ಪುಷ್ಪದಂತನು (ಗುಪ್ತ ಅರಸರ ಕಾಲದಲ್ಲಿ) ತನ್ನ 'ಮಹಿಮ್ನಸ್ತವ'ದಲ್ಲಿ ಸೂಚಿಸುತ್ತಾನೆ. ಅರ್ಧನಾರೀಶ್ವರನ ಪ್ರತಿಮಾಲಕ್ಷಣವು ಬಲಭಾಗದಲ್ಲಿ ಉಗ್ರವಾದ ನೋಟವೂ ಎಡಭಾಗದಲ್ಲಿ ಸೌಮ್ಯವಾದ ನೋಟವೂ ಇರಬೇಕೆನ್ನುತ್ತದೆ ('ದಕ್ಷಿಣೇ ರೌದ್ರದೃಷ್ಟಿಃ ಸ್ಯಾತ್ ವಾಮಪಾರ್ಶ್ವೇತು ಶೀತಲಂ') ಎಂದರೆ ಅರ್ಧನಾರೀಶ್ವರ ಮೂರ್ತಿಯು ರುದ್ರ-ಶಿವರ ವ್ಯಕ್ತಸಂಘಟನೆಯೆಂದಾಯಿತು. ಇವೆರಡರ ಅವಶ್ಯಕ ಸಂಘಟನೆಯೇ ಲಿಂಗ ವಾಯವೀಸಂಹಿತೆಯಲ್ಲಿ 'ಲಿಂಗಂ ತು ಶಿವಯೋರ್ದೇಹಃ ಎನ್ನುವ ಮಾತು ಬರುತ್ತದೆ. ಶಿವ–ಶಿವೆಯರಿಬ್ಬರ ದೇಹವೂ ಕೂಡಿ ಲಿಂಗವಾಯಿತೆಂದು ಧ್ವನಿ. ಲಿಂಗದಲ್ಲಿ ಶಿವಭಾಗವೇ ವಿಶಿಷ್ಟವಾದುದಾದರೂ, ಅದರಲ್ಲಿನ ಶಿವಾ-ಭಾಗ ಅಥವಾ ಸೌಮ್ಯಭಾಗವನ್ನು (ಎಂದರೆ ಸ್ತ್ರೀ ಭಾಗವನ್ನು) ಪೂಜಿಸುವವರು ಶೈವರೆ ನಿಸಿದರು ಎಂದು 'ಆಚಾರಭೇದತಂತ್ರ' ಹೇಳುತ್ತದೆ :-

'ಅಷ್ಟಾಂಗಯೋಗ ಸಂಯುಕ್ತೋ ಯಜೇದ್ದೇವೀಂ ವಿಧಾನತಃ ।
ಯಾವದ್ ಧ್ಯಾನಂ ಸಮಾಧಿಶ್ಚ ತಾವತ್ ಶೈವಃ ಪ್ರಚಕ್ಷತೇ"

ಇದು ಶಕ್ತಿವಿಶಿಷ್ಟವಾದ ಶಿವನ ಕಲ್ಪನೆ. ಶ್ರೀ ಕಂಠಭಾಷ್ಯದಲ್ಲಿ **ವಿಚಿತ್ರಾನಂತಶಕ್ತಿ ಶಬಲಮಾಯಾಪರಮಶಕ್ತಿ ವಿಶಿಷ್ಟಃ ಪರಮೇಶ್ವರಃ** ಎನ್ನುವ ನಿರೂಪಣೆಯಿದೆ ಯಷ್ಟೆ. ಶಿವನ ಕಲ್ಪನೆಯಲ್ಲಿ ಶಕ್ತಿಯೂ ಎಡೆಬಿಡದೆ ಸೇರಿಬರುವುದು ತುಂಬ ಹಿಂದಿನ ಸಂಪ್ರದಾಯ. ಶಿವನಿಗೆ ಆದಿಶಕ್ತಿ, ಪರಾಶಕ್ತಿ, ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾ ಶಕ್ತಿಗಳೆಂಬ ಐದು ಶಕ್ತಿಗಳನ್ನು ಹೇಳಿ ಅದಕ್ಕನುಣವಾಗಿ ಹಲವು ಪಂಚ ಪ್ರಕ್ರಿಯೆ ಗಳನ್ನು ಅಳವಡಿಸಿದ್ದಾರೆ.

ಕ್ರಿಸ್ತಪೂರ್ವ ಮೊದಲ ಶತಕದ ಸುಮಾರಿಗೇ ಭಾಗವತ ಸಂಪ್ರದಾಯದಲ್ಲಿ ಪಂಚವೀರರ ಎಣಿಕೆಯಿದ್ದಿತು. ಮಥುರೆಯ ಬಳಿ ಮೋರಾ ಬಾವಿಯಲ್ಲಿ ದೊರೆತ ಮಹಾಕ್ಷತ್ರಪ ರಾಜೂವಲನ ಶಾಸನವು 'ಭಗವತಾಂ ವೃಷ್ಣೀನಾಂ ಪಂಚವೀರಾ ಣಾಂ ಪ್ರತಿಮಾಃ, ಎಂದು ಉಲ್ಲೇಖಿಸುತ್ತದೆ. ಈ ಪಂಚವೀರರು, ಈ ಶಾಸನವನ್ನು

ಪತ್ತೆಮಾಡಿ ಪ್ರಕಟಿಸಿದ ಲ್ಯೂಡೆರ್ಸ್ ಮತ್ತು ಅಸ್‌ಡಾಫ್ ಇವರ ಪ್ರಕಾರ ಬಲದೇವ, ಅಕ್ರೂರ, ಆನಾದೃಷ್ಟಿ, ಸಾರಣ ಮತ್ತು ವಿದೂರಥ ಎಂಬುವರು. ಆದರೆ ವಾಯು ಪುರಾಣದ 'ಪಂಚೈತೇ ವಂಶವೀರಾಃ, ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಸಾಂಬ, ಅನಿರುದ್ಧ ಈ ಐವರಿಗೂ ಮೇಲೆ ಹೇಳಿದ ಐದು ಶಕ್ತಿಗಳಿಗೂ ಸಂಬಂಧವಿಲ್ಲದೆ ಇಲ್ಲ. ಭಾಗವತಧರ್ಮದಲ್ಲಿ ಶೈವ, ವೈಷ್ಣವ ಎನ್ನುವ ಚೌಕಟ್ಟು ಗೌಣವಾದ ವಿವರ; ಎರಡಕ್ಕೂ ಮೂಲವಾದ, ಸಮನಾದ ಕಲ್ಪನೆಯ. ಕ್ರಿಯೆಗಳ ಸಮಷ್ಟಿವ್ಯಾಪಾರವನ್ನು ನಾವು ಗಮನಿಸಬೇಕು. ಪಂಚಶಕ್ತಿ, ಪಂಚವೀರ, ಪಂಚ ವ್ಯೂಹ, ಪಂಚಮುಖ, ಪಂಚಾಗ್ನಿ ಎಂಬುವೆಲ್ಲ ಭಾಗವತಧರ್ಮದ ವಿವರಗಳೇ. ಶಕ್ತಿಯನ್ನು (ಪ್ರಕೃತಿಯನ್ನು) ಮಾಯೆಯಿಂದೂ, ಶಕ್ತಿಯನ್ನುಳ್ಳ ತತ್ವವನ್ನು ವಿಷ್ಣುವೆಂದೂ ಮಹೇಶ್ವರನೆಂದೂ ನಿರ್ದೇಶಿಸುವುದನು ಬಗವದ್ಗೀತೆಯಲಿಯೂ ಶ್ವೇತಾಶ್ವತರೋಪನಿಷತ್ತಿನಲಿಯೂ ಕಾಣುತ್ತೇವೆ. ವಿಷ್ಣುಪರವಾದ ಭಾಗವತಧರ್ಮಕ್ಕೆ ಭಗವದ್ಗೀತೆ ಆಧಾರವಾದರೆ ಉಗಮಸ್ಥಾನವಾದರೆ, ಶಿವಪರವಾದ ಭಾಗವತ ಧರ್ಮಕ್ಕೆ ಶ್ವೇತಾಶ್ವತರೋಪನಿಷತ್ತು ಆಧಾರ, ಆಕರ, ಶಕ್ತಿವಿಶಿಷ್ಟವಾದ ತತ್ವವನ್ನು ನಿರೂಪಿಸುವುದೇ ಭಾಗವತಾಧರ್ಮದ ತಿರುಳೆನ್ನಬಹುದು.

ಶೈವಧರ್ಮದ ಹಿನ್ನೆಲೆಯನ್ನು ಹುಡುಕಾಡುತ್ತ ಕೆಲವು ಪಂಡಿತರು ಆರ್ಯ-ದ್ರಾವಿಡ ಎನ್ನುವ ವಿಭಾಗವನ್ನು ಕಲ್ಪಿಸಿಕೊಂಡು. ಶಿವನ ಹೆಗ್ಗಳಿಕೆಯನ್ನು ಅರಿತುಕೊಂಡ ಸೈಂಧವಸಂಸ್ಕೃತಿಯು ದ್ರಾವಿಡರದ್ದು, ಅದಕ್ಕಿಂತ ಬೇರೆಯಾದ ವೈದಿಕ ಸಂಸ್ಕೃತಿ ಆರ್ಯರದ್ದು ಎಂದು ಹೇಳುತ್ತಾರೆ ಈಕಲ್ಪನೆಗೆ ಬುಡವಿಲ್ಲವೆಂದು ಈಗ ಸಿದ್ಧವಾಗಿದೆ. ದ್ರಾವಿಡವೆಂದಾಗಲೀ ಆರ್ಯವೆಂದಾಗಲೀ ಪರಿಶುದ್ಧವಾದ ಜನಾಂಗಯಾವ ಕಾಲದಲ್ಲಿಯೂ ಇರಲಿಲ್ಲ; ನಮ್ಮ ನಾಡಿನ ಇತಿಹಾಸದ ಮೊದಲ ಹಂತಗಳಿಂದಲೂ, ಪ್ರಾಗಿತಿಹಾಸಕಾಲದಿಂದಲೂ ಇಲ್ಲಿದ್ದವರೆಲ್ಲ ಸಂಮಿಶ್ರ ಜನರೇ, ಮೇಲಾಗಿ ಆರ್ಯ, ದ್ರಾವಿಡ ಎನ್ನುವ ಮಾತುಗಳು ಜಾತಿಸೂಚಕವೂ ಅಲ್ಲ ಸಂಸ್ಕೃತಿ ಸೂಚಕವೂ ಅಲ್ಲ, ನಮ್ಮ ಸಂಸ್ಕೃತಿ ಮೊದಲಿಂದಲೂ ಸಂಮಿಶ್ರ ಸಂಸ್ಕೃತಿಯೇ. ಸೈಂಧವ ಸಂಸ್ಕೃತಿಗೂ ವೈದಿಕಸಂಸ್ಕೃತಿಗೂ ವಿರೊಧವಿದ್ದಿತೆಂದು ಬಗೆಯುವುದೂ ತಪ್ಪೇ. ಎರಡು ಪರಸ್ಪರ ಪೂರಕವಾದುವು, ಕಾಲಕ್ರಮದಲ್ಲಿ ಕಾರಣಾಂತರಗಳಿಂದ ಬಂದೊದಗಿದ ಭೇದಗಳನ್ನೂ ವಿರೋಧಾಭಾಸಗಳನ್ನೂ ಈ ಪ್ರಾಚೀನಸ್ತರದಲ್ಲಿ ಕಾಣಲೆಣಿಸುವುದು ಸರಿಯಲ್ಲ. ಹಿನ್ನೆಲೆಯನ್ನು ಅರಸುವಾಗ, ಇತಿಹಾಸವನ್ನು ಗುರುತಿಸುವಾಗ ಕೆಲವು ಎದ್ದುಕಾಣುವ ವಿವರಗಳನ್ನು ಪರಿಶೀಲಿಸಬೇಕಾಗುತ್ತದೆ. ಶೈವಧರ್ಮದ ಹಿನ್ನೆಲೆಯಲ್ಲಿ ಹರಡಿಕೊಂಡಿರುವ ಇಂಥ ಕೆಲವು ವಿವರಗಳನ್ನು ಇಲ್ಲಿ ತೋರಿಸಲಾಗಿದೆ.

## ಕಡಿಮೆ ಹಣ ಖರ್ಚು ಮಾಡಿ

## ಹೆಚ್ಚು ಬಟ್ಟೆಗಳನ್ನು ಒಗೆಯಿರಿ

- ಇದೀಗ ನೀವು ಸಾಬೂನಿಗೆ ಕಡಿಮೆ ಹಣ ಖರ್ಚು ಮಾಡಿ ಹೆಚ್ಚು ಬಟ್ಟೆಗಳನ್ನು ಒಗೆಯಬಹುದು.
- ಕಸ್ತೂರಿ ನೀಲಂ ಹಾಗೂ ಕಸ್ತೂರಿ ಬಾರ್ ಸೋಪ್ ಉಪಯೋಗಿಸುವುದರಿಂದ ಇದು ಸಾಧ್ಯ.
- ಕಸ್ತೂರಿ ಸಾಬೂನುಗಳು ಬಹು ಉಳಿತಾಯಕರವಾದುದು ಅಲ್ಲದೆ, ಪ್ರತಿ ಬಾರ್ ಸೋಪಿನಿಂದಲೂ ಹೆಚ್ಚು ಬಾರಿ ಒಗೆಯಲು ಸಾಧ್ಯವಾಗುತ್ತದೆ.
- ಇದರಲ್ಲಿ ವಿಶೇಷ ಡಿಟರ್ಜೆಂಟುಗಳು ಮಿಶ್ರಿತವಾಗಿರುವುದರಿಂದ ನಿಮ್ಮ ಉಡುಪುಗಳು ಬಿಳುಪಿಗಿಂತಲೂ ಅತ್ಯಧಿಕ ಉಜ್ವಲವಾಗಿರುತ್ತವೆ.

ಕಸ್ತೂರಿ ಸಾಬೂನುಗಳನ್ನು ಇಂದೇ ಉಪಯೋಗಿಸಿರಿ

'ಕಸ್ತೂರಿ'
ಬಾರ್ ಸೋಪ್

'ಕಸ್ತೂರಿ'
ನೀಲಂ ಬಾರ್ ಸೋಪ್

ತಯಾರಕರು :

**ರಾಮಕೃಷ್ಣ ಆಯಿಲ್ ಮಿಲ್, ತುಮಕೂರು**

# ಬಸವಣ್ಣನವರ ದೃಷ್ಟಿಯಲ್ಲಿ ಸ್ತ್ರೀ

– ಜೆ. ಶಾರದಶಾಜಶೇಖರ್
847. 4ನೆ ಮುಖ್ಯರಸ್ತೆ, ವಿಜಯ ನಗರ. ಬೆಂಗಳೂರು-40

ಬಸವಣ್ಣನವರ ದೃಷ್ಟಿಯಲ್ಲಿ ಸ್ತ್ರೀ ಸಮಾನತೆಯ ಸಹಭಾಗಿ ಎನಿಸಿಕೊಂಡಿದ್ದಳು. ಭಾರತದಲ್ಲಿ ಪ್ರಾಚೀನ ಕಾಲನದಲ್ಲಿ ಸ್ತ್ರೀಯರಿಗೆ ಮನ್ನಣೆ ಇತ್ತಾದರೂ ಕಾಲಕ್ರಮೇಣ ಆ ಮನ್ನಣೆ ಸ್ತ್ರೀಯರಿಗೆ ಕೊಡಲು ನಿರಾಕರಿಸಿತು ಸಮಾಜ. ಬುದ್ಧನೂ ಸಹ ಒತ್ತಾಯಕ್ಕೆ ಮಣಿದೇ ಸ್ತ್ರೀಯರು ಧರ್ಮಕಾರ್ಯದಲ್ಲಿ ಪಾಲ್ಗೊಳ್ಳಲು ಅವಕಾಶವಿತ್ತನು. ಹಿಂದೂಧರ್ಮದ ಅನೇಕ ಸಮಾಜಗಳಲ್ಲಿ ವೀರಶೈವ ಸಮಾಜವನ್ನು ಬಿಟ್ಟು ಉಳಿದ ಯಾವ ಸಮಾಜದಲ್ಲಿಯೂ ಸ್ತ್ರೀಯರಿಗೆ ಧರ್ಮದಲ್ಲಿ ಯಾವ ತರಹದ ಅಧಿಕಾರ ನೀಡಿದ್ದು ಕಂಡು ಬರುವುದಿಲ್ಲ. ಬ್ರಾಹ್ಮಣ ಧರ್ಮದಲ್ಲಿ ಸ್ತ್ರೀ ಶೂದ್ರ ಸ್ಥಾನದಲ್ಲಿದ್ದಳು, ಆಕೆಗೆ ದೀಕ್ಷೆಯ ಹಕ್ಕಿಲ್ಲ. ಪೂಜೆಯ ವಿಧಿಗಳಲ್ಲಿ ಭಾಗ ವಹಿಸಲು ಅರ್ಹಳಲ್ಲಿ, ಋತು ಚಕ್ರಕ್ಕೆ ಸಿಕ್ಕಿರುವುದರಿಂದ ಆಕೆ ಮೈಲಿಗೆಯ ಮುದ್ದೆ, ಆಕೆ ಒಂದು ವಿಧದಲ್ಲಿ ಸೇವಕಿ, ದಾಸಿ, ಅದರೆ ಬಸವಣ್ಣನವರ ದೃಷ್ಟಿಯಲ್ಲಿ ಸ್ತ್ರೀ ಮಹಾದೇವಿ. ಆಕೆ ಯಾವ ಪಾತ್ರವನ್ನಾಡಲೂ ಯೋಗ್ಯತೆಯನ್ನುಳ್ಳವಳು. ಪೂಜೆಯಲ್ಲಿ ಆಕೆಗೆ ಸಮಾನ ಸ್ಥಾನ ಉಂಟು. ದೀಕ್ಷೆಯನ್ನು ಪಡೆಯಲುಬಲ್ಲಳು. ಪುರುಷನಂತೆ ಸ್ತ್ರೀಯು ಸಹ ಇಷ್ಟಲಿಂಗವನ್ನು ಧರಿಸಲು ಅರ್ಹಳು.

ದ್ವಿಜರಿಗೆ ಲಗ್ನದಲ್ಲಿ ಮಾತ್ರ ಗಾಯತ್ರಿಯ ಉಪದೇಶವಾಗುವದರಿಂದ ಆವಳಿಗೆ ಅದೊಂದು ಧಾರ್ಮಿಕ ವಿಧಿ ಇರುವುದೆಂದು ಹೇಳುತ್ತಾರೆ. ಆದರೆ ಲಗ್ನವಾಗುವವರೆಗೆ ಯಾವ ಸಂಸ್ಕಾರವೂ ಇರುವುದಿಲ್ಲ. ಸ್ತ್ರೀಯರಿಗೆ ಇದ್ದ ಅಧಿಕಾರವನ್ನು ಬಸವಣ್ಣನವರು ಆಚರಣೆಯಲ್ಲಿ ತಂದು ಜಗತ್ತಿನಲ್ಲಿ ಕೀರ್ತಿ ಕಾಯರಾದರು.

ಯಾವ ತತ್ವಗಳೇ ಇರಲಿ ಶಾಸ್ತ್ರಗಳಲ್ಲಿ ಇದ್ದು ಕೃತಿಯಲ್ಲಿ ಬಾರದೆ ಇದ್ದರೆ ಅವುಗಳ ಪ್ರಯೋಜನವೇನು ? ಅವುಗಳನ್ನು ಜನ ಸಾಮಾನ್ಯರಲ್ಲಿ ಯಾರು ಪ್ರಚಾರ ಮಾಡುತ್ತಾರೆಯೋ ಅವರೇ ಧರ್ಮವೀರರು.

ಬಸವಣ್ಣನವರ ದೃಷ್ಟಿಕೋನದಲ್ಲಿ ಸ್ತ್ರೀಗೆ ತನ್ನ ಅಭಿಪ್ರಾಯಗಳನ್ನು ಅಭಿವ್ಯಕ್ತಿಗೊಳಿಸಲು ಸ್ವಾತಂತ್ರ್ಯವಿದೆ. ಯಾರ ಜೊತೆಗೂ ಯಾವ ವಿಷಯದಲ್ಲಾದರೂ ಚರ್ಚೆಗೆ ನಿಲ್ಲಲು ಆಕೆಗೆ ಆವಕಾಶ ಮಾತ್ರವಲ್ಲದೆ ಯೋಗ್ಯತೆಯೂ ಇದೆ ಎಂದು ಭಾವಿಸಿದ್ದರು.

ಶಿವಾನುಭವ ಮಂಟಪದ ಸಭೆಯಲ್ಲಿ ಧಾರ್ಮಿಕ ಚರ್ಚೆಗಳು ನಡೆದಾಗ ಅಕ್ಕಮಹಾದೇವಿ, ಮುಕ್ತಾಯಕ್ಕ ನೀಲಕ್ಕ, ಗಂಗಾದೇವಿ, ಲಿಂಗಮ್ಮ ಮೊದಲಾದ ೨೫-೩೦ ಜನ ಹೆಣ್ಣುಮಕ್ಕಳು ಭಾಗವಹಿಸುತ್ತಿದ್ದರು. ಇವರೆಲ್ಲರೂ ವಚನಗಳನ್ನು ರಚಿಸಿದ್ದಾರೆ, ಇವರಲ್ಲಿ ಕೆಲವರ ವಚನಗಳು ಅತ್ಯಂತ ಉತ್ತಮವಾಗಿವೆ.. ಅಕ್ಕಮಹಾದೇವಿ, ಮುಕ್ತಾಯಕ್ಕ, ಲಕ್ಕಮ್ಮ ಮೊದಲಾದ ವೇದಾಂತಿಗಳು ಇದ್ದರು. ಅವರ ವಚನಗಳು ಗಂಭೀರವಾಗಿದ್ದು, ಓದುಗರನ್ನು ಮುಗ್ಧರನ್ನಾಗಿ ಮಾಡುವ ಮೋಹಕ ಗುಣ ಇರುತ್ತದೆ. ಶೂನ್ಯ ಸಂಪಾದನೆಯಲ್ಲಿ ಇವರ ಸಂಪಾದನೆಗಳು ಬಹಳ ಉತ್ಕೃಷ್ಟಗಳಾಗಿರುತ್ತವೆ. ಮುಕ್ತಾಯಕ್ಕ ಮತ್ತು ಪ್ರಭುದೇವರು ಕೂಡ ಮಾಡಿದ ಸಂಭಾಷಣೆಯು ಎಂತಹ ಪಂಡಿತರನ್ನಾದರೂ ತಲೆದೂಗಿಸದೆ ಬಿಡುವುದಿಲ್ಲ. ಹೆಣ್ಣುಮಕ್ಕಳು ಇಂತಹ ಯೋಗ್ಯತೆ ಪಡೆಯಬೇಕಾದರೆ ಅಂತಹ ವಾತಾವರಣವೂ ಸಹ ಅಷ್ಟೇ ಮುಖ್ಯವಾದದ್ದು. ಅಂತಹ ವಾತಾವರಣವನ್ನು ಸೃಷ್ಟಿಸಿಕೊಟ್ಟವರು ಬಸವಣ್ಣನವರು. ಹೆಣ್ಣುಮಕ್ಕಳಿಗೆ ಅನುಭವಮಂಟಪದಲ್ಲಿ ಮುಕ್ತ ಪ್ರವೇಶ ದೊರೆತುದರ ಕಾರಣವಾಗಿ ಅವರಿಗೆ ಉತ್ತಮವಾದ ಅನುಭವ ದೊರೆಯಿತು. ಇದಕ್ಕೆಲ್ಲಾ ಬಸವಣ್ಣನವರ ದೂರ ದೃಷ್ಟಿಯೇ ಕಾರಣ.

ಅಕ್ಕಮಹಾದೇವಿ ಭಾರತದಲ್ಲಿ ಸುಪ್ರಸಿದ್ಧವಿರಾಗಿಣಿ. ಆಕೆಗೂ ಅನುಭವ ಮಂಟಪದಲ್ಲಿ ಅನುಭವ ಶಿಕ್ಷಣ ದೊರೆಯಿತು. ಬಸವಣ್ಣನವರು ಸ್ತ್ರೀಯರಿಗೂ ಕೂಡ ಅನಿರ್ಬಂಧ ಪ್ರವೇಶವನ್ನು ಇಡದೇ ಇದ್ದರೆ ಆಗಿನ ಕಾಲದಲ್ಲಿ ಇಂತಹ ದಿವ್ಯ ಸ್ತ್ರೀ ರತ್ನಗಳು ದೊರೆಯುತ್ತಿರಲಿಲ್ಲ.

ಬಸವಣ್ಣನವರು ಸ್ತ್ರೀಯರ ವಿಷಯದಲ್ಲಿ ಅನೇಕ ವಚನಗಳನ್ನು ರಚಿಸಿದ್ದಾರೆ, ಪರಸ್ತ್ರೀ ವಿಷಯದಲ್ಲಿ ಬಹಳ ಅಂಜಿಕೆಯಿಂದ ನಡೆದುಕೊಂಡದ್ದು ತಿಳಿದು ಬರುತ್ತದೆ.

‘ ಪರ ವಧುವನು ಮಹಾದೇವಿಯೆಂಬೆ ಕೂಡಲ ಸಂಗಮದೇವಾ ” ಎಂದರು.

‘ ಹರಿವ ಹಾವಿಗೆ ಅಂಜೆ, ಉರಿವ ನಾಲಿಗೆ ಗಂಜೆ, ಸುರಗಿಯ ಮೊನಗಂಜೆ, ಒಂದಕ್ಕಂಜುವೆ ಒಂದಕ್ಕಳುಕುವೆ, ಪರಸ್ತ್ರೀ, ಪರಧನವೆಂಬೀ ಜೂಜಿಂಗಂಜುವೆ, ಮುನ್ನಂಜದ ರಾವಣನೇ ವಿಧಿಯಾದ ಅಂಜುವೆನಯ್ಯ ಕೂಡಲಸಂಗಮದೇವಾ.

ಈ ವಚನಗಳಿಂದ ತಿಳಿದು ಬರುವ ಅಂಶವೆಂದರೆ ಯಾವುದಕ್ಕೂ ಅಂಜದೆ ಇದ್ದರೂ ಪರಸ್ತ್ರೀಯರಿಗೆ ಮಾತ್ರ ಅಂಜುವೆನಯ್ಯ ಎಂಬ ಅವರ ವೀರ ವಾಣಿಯು ಮಾರ್ಗದರ್ಶಕ ವಾಗಿರುತ್ತದೆ.

ಬಸವಣ್ಣನವರು ಧಾರ್ಮಿಕ ಕ್ರಾಂತಿಯ ಮೂಲಪುರುಷರಾಗಿದ್ದ ಕಾರಣ ಅವರ ಛ ಯಾನು ವರ್ತಿಗಳಂತಿದ್ದ ಶರಣರೆಲ್ಲರೂ ಸಹ ಅವರು ಕೈಗೊಂಡ ಆಚರಣೆಗಳನ್ನೆಲ್ಲಾ ಲೋಕದಲ್ಲಿ ಪ್ರಚಂಡವಾಗಿ ಪ್ರಚಾರ ಮಾಡುತ್ತಿದ್ದರು ಎಂಬುದನ್ನು ಆಯಾಯ ಶರಣರ ವಚನಗಳನ್ನು ನೋಡಿದಾಗ ತಿಳಿದು ಬರುತ್ತದೆ.

ದೇವರ ದಾಸಿಮಾರ್ಯರು ತಮ್ಮ ವಚನದಲ್ಲಿ ಈ ರೀತಿ ಹೇಳಿದ್ದಾರೆ.

ಶಿವಭಕ್ತರು ತಮ್ಮ ನಿಜಕೈಲಾಸಕ್ಕೆ ಹೋದರೆ
ಅವರರಸಿಯ ಪಾರ್ವತಿಯು ಸರಿ ಎಂದು
ಕಾಣಲಿಬೇಕು. ಅಲ್ಲಿ ಅನುಸರಣೆಯ ಕೊಟ್ಟು
ಬೆರಸಿ ಮಾತನಾಡುವ ನರಕಿಗಳ ನೇನೆಂಬರಾಮನಾಥಾ.

ಕೇವಲ ಪತಿಯಿದ್ದ ಸ್ತ್ರೀಯರುಕೂಡ ಅಲ್ಲ, ವಿಧವೆಯರು ಸಹ ಆತ್ಮಾದರದಿಂದ ನರ್ತಿಸಬೇಕೆಂದು ವಚನಕಾರರು ಇಲ್ಲಿ ಹೇಳಿದ್ದಾರೆ. ಅವರನ್ನು ಸಹ ಪಾರ್ವತಿ ಸಮಾನರೆಂದು ತಿಳಿಯತಕ್ಕದ್ದು, ವಿಧವೆಯರು ಲಿಂಗವಂತರಿಗೆ ಅಶುಭರಲ್ಲ ಅವರೂ ಪಾರ್ವತಿಯ ಸಮಾನರು.

ಬಸವಣ್ಣನವರು ತಮ್ಮ ವಚನ ಒಂದರಲ್ಲಿ ಈ ರೀತಿ ಹೇಳಿದ್ದಾರೆ" "ಛಲಬೇಕು ಶರಣಂಗೆ ಪರಸತಿಯ ನೊಲ್ಲೆನೆಂಬ" ಮನುಷ್ಯನಿಗೆ ಛಲಬೇಕು, ಪರಪತಿ ನೊಲ್ಲನೆಂಬ, ಎಂಥಹ ಉತ್ಕೃಷ್ಟವಾದಮಾತು. ದೂರದರ್ಶಿಗಳಾದ ಬಸವಣ್ಣನವರು ಅಂಂವರ್ಷಗಳ ಹಿಂದೆಯೇ ಸ್ತ್ರೀಯರಿಗೆ ಸರ್ವ ವಿಧದಲ್ಲೂ ಸಮಾನತೆಯನ್ನು ನೀಡಿದ್ದರು.

ಹೆಣ್ಣು ಮಾಯೆಯಲ್ಲ, ಎಂಬುದು ಶರಣರ ಒಟ್ಟಿನ ಅಭಿಪ್ರಾಯ, ಸಂಪ್ರದಾಯದ ಪ್ರಕಾರ ಹೆಣ್ಣು ಪ್ರಾಪಂಚಿಕ ದುಃಖಕ್ಕೆ ಮೂಲ, ಆದರೆ ಶರಣರ ಪ್ರಕಾರ ದುಃಖಕ್ಕೆ ಮೂಲ ಹೆಣ್ಣು ಅಲ್ಲ, ಮಣ್ಣು ಅಲ್ಲ, ಹೊನ್ನು ಅಲ್ಲ, ಮಾನವನ ಮನದ ಮುಂದಣ ಆಸೆಯೆ ಮೂಲ ಎಂದರು.

ಹೆಣ್ಣು-ಗಂಡೆಬುದು ಹೊರಗಿನ ರೂಪವೇ ಹೊರತು ಆದರೊಳಗಿನ ಆತ್ಮಯಾವುದೂ ಅಲ್ಲ ವೆಂಬುದು ಶರಣರ ಸ್ಪಷ್ಟ ಅಭಿಪ್ರಾಯ. ಜೊತೆಗೆ ಹೆಣ್ಣು ಸಹಜೀವನಕ್ಕೆ ಅಗತ್ಯವಾದ ಜೀವಿಯೆಂಬುದನ್ನು ಅವರು ಮನಃಪೂರ್ವಕವಾಗಿ ಒಪ್ಪಿಕೊಂಡಿದ್ದರು. ಬಸವಣ್ಣನವರು ಪುರುಷರನ್ನು ಹೇಗೆ ಪೂಜ್ಯಭಾವದಿಂದ ಕಾಣುತ್ತಿದ್ದರೊ ಹಾಗೆ ಸ್ತ್ರೀಯರನ್ನೂ ಕಂಡರು. ತಮ್ಮನ್ನು ತಾವು ಹೆಣ್ಣಾಗಿ ಪರೀಕ್ಷಿಸಿ ಕೊಂಡಿದ್ದಾರೆ. ದಾಸಿಯಾಗಿ ಕೈಂಕರ್ಯ ಮಾಡಿದ್ದಾರೆ, ಸತಿಯಾಗಿ ತಮ್ಮನ್ನು ತಾವು ನಿವೇದಿಸಿ ಕೊಂಡಿದ್ದಾರೆ. ಅವರ ರೀತಿ ನೀತಿಯಲ್ಲಿ ಸ್ತ್ರೀಗೆ ಅಪಚಾರ ವಾಗುವಂಥಹದನ್ನು ಕಾಣುವುದು ದುರ್ಲಭ. ಬಸವಣ್ಣನವರು ತಮ್ಮ ಆಲೋಚನೆಗೂ ಅನುಷ್ಠಾನಕ್ಕೂ ಸಂಪರ್ಕಕಲ್ಪಿಸಿದ ಭದ್ರ ಸೇತುವೆ.

 ( 10 ನೇ ಪುಟದಿಂದ )

ಇಂಗ್ಲೀಷರದಿನ್ನೇನು ? ದೊಡ್ಡ ದೊಡ್ಡ ಮನುಷ್ಯರು ಮದ್ಯದ ಅಮಲಿನಿಂದ ಬೀದಿಯಲ್ಲಿ ಬಿದ್ದು ಉರುಳಾಡುತ್ತಿದ್ದುದನ್ನು ನೋಡಿದ್ದೇನೆ. ಇದರಲ್ಲಿ ಸ್ವಲ್ಪವೂ ಉತ್ಪ್ರೇಕ್ಷೆಯಿಲ್ಲ. ಯುದ್ಧಕಾಲದಲ್ಲಿ ಅನೇಕ ಇಂಗ್ಲೀಷರು ಟ್ರಾನ್ಸ್‌ವಾಲನ್ನು ಬಿಡಬೇಕಾಯಿತು- ಕೆಲವರನ್ನು ನಮ್ಮ ಮನೆಯೊಳಗೆ ಸೇರಿಸಬೇಕಾಯಿತು. ಅವರಲ್ಲೊಬ್ಬ ಇಂಜಿನೀಯರು, ಹೆಂಡದ ಅಮಲು ಇಲ್ಲದಾಗ ಬಹಳ ಒಳ್ಳೆಯ ಮನುಷ್ಯ. ಅವನು ಬ್ರಹ್ಮಜ್ಞಾನ ಸಮಾಜದವನು. ದೌರ್ಭಾಗ್ಯದಿಂದ ಕುಡಿತವನ್ನು ಕಲಿತಿದ್ದ. ಕುಡಿದಾಗ ಅವನಿಗೆ ಮೈಮೇಲೆ ಜ್ಞಾನವೇ ಇರುತ್ತಿರಲಿಲ್ಲ. ಈ ಕೆಟ್ಟ ಚಾಳಿಯನ್ನು ಬಿಡಲು ಅವನು ಬಹಳ ಕಷ್ಟಪಟ್ಟ. ಸಾಧ್ಯವಾಗಲಿಲ್ಲವೆಂದು ಕಾಣುತ್ತದೆ.

ದಕ್ಷಿಣ ಆಫ್ರಿಕಾದಿಂದ ಭಾರತಕ್ಕೆ ಬಂದಾಗ ಮದ್ಯದ ದುಷ್ ಪರಿಣಾಮದ ಅನುಭವ ಮತ್ತೆ ಆಯಿತು. ರಾಜರು ಹಲವರು ಕುಡಿತದಿಂದ ಹಾಳಾಗುತ್ತಿದ್ದಾರೆ. ಅವರ ಹಾಗೆ ಅನೇಕ ಶ್ರೀಮಂತ ತರುಣರು. ಹೆಂಡದ ಪರಿಣಾಮ ಕೂಲಿಗಾರರಲ್ಲಂತೂ ಕರುಣಾಜನಕ ಇಂಥ ಕಟುತರ ಅನುಭವಗಳಿಂದ ನಾನು ಮದ್ಯ ಪಾನಕ್ಕೆ ಸಂಪೂರ್ಣ ವಿರೋಧಿಯಾಗಿರುವುದು ಯಾರಿಗೂ ಆಶ್ಚರ್ಯವನ್ನುಂಟು ಮಾಡಲಾರದು.

ಒಂದು ಮಾತಿನಲ್ಲ, ಶರೀರ' ನೀತಿ ಬುದ್ಧಿ ಭ್ಯಾಗ ಎಲ್ಲ ಬಗೆಯಲ್ಲೂ ಮದ್ಯ ಸರ್ವವಿನಾಶಕಾರಿ.

ನಿಮ್ಮ ಬಟ್ಟೆಗಳ
ಶುಭ್ರತೆಗೆ
KESARI
BAR SOAP
ಕೇಸರಿ ಬಾರ್ ಸೋಪ್
ಕೇಸರಿ ಬಾರ್ ಸೋಪ್
ತಯಾರಕರು:
ಜಿನೇಂದ್ರ
ಸೋಪ್ ಫ್ಯಾಕ್ಟರಿ,
ಇಂಡಸ್ಟ್ರಿಯಲ್ ಎಸ್ಟೇಟ್, ತುಮಕೂರು.

# ಆಗುಂಬೆ

ಏಕೆಂಬೆ ಏಕೆಂಬೆ ? ಏಕೆಂಬೆಯೂ ?
ಜೀವನದಿ ನೋಡು ಮತ್ತು ಮತ್ತೊಮ್ಮೆ ಆಗುಂಬೆ
ಆಗುಂಬೆ ತಾಯ್ಮಡಿಲಲ್ಲಿ ಎಲ್ಲರೂ ಶಿಶುಗಳೇ
ಆಗುವುದಂಥಹ ರಸಾನುಭವವಲ್ಲಿ
ಆತ್ಮಚೈತನ್ಯವನು ಕಾಣುವೊಡೆ
ಏರು ಏರಲೇ ಜೀವ ಎತ್ತರೆತ್ತರಕೆ !
ಎತ್ತರದಿ ನಿಂದು ; ಕಣ್ಮನ ಘುಟ್ಟುವನ ನೋಡೆ
ಕಾಣುವುದು ಸುತ್ತಲೂ ದಿಕ್ ದಿಗಂತ
ಏನ್ ಭೀಕರಾರಣ್ಯ ಏನ್ ಗಿಡಮರಗಳಲ್ಲಿ
ನೋಡ ನೋಡುತೆ ಮೈ ನವಿರೇಳುವುದು !
ಪ್ರಕೃತಿ ತಾಯ ತೊಟ್ಟಿಲಲಿ ಹಸಿರ ಹೊದಿಕೆಯು
ಹೊದಿಸಿ ಉಯ್ಯಾಲೆ ತೂಗಿದಂತಾನಂದ ! !
ಆನಂದದಿಂ ಸಚ್ಚಿದಾನಂದ ದರ್ಶನವಹುದಲ್ಲಿ
ಕಂತುತಿಹ ಭಾನು ಏನ್ ರಮ್ಯ ! ಏನ್ ಗಮ್ಯ !!
ಸ್ವಂತ ಕಣ್ಣೊಳೆ ಪಡೆಯ ಬೇಕ್ ಆನಂದ .
ಸಚ್ಚಿದಾನಂದ ದರ್ಶನದಿ ತಲ್ಲೀನವಾಗುತಿರೆ
ಬಾನ್ ರವಿಯು ಸಚ್ಚಿದಾನಂದದಲ್ಲಿ ಗಿರಗಿರನೆ
ತಿರುಗುತಲೆ ಬಣ್ಣಬಣ್ಣದ ಚಂಡಂತೆ ಐಕ್ಯವಾಗ್ವುದ
ಅರಗಿಸಿಕೊಳೆ ಕಾಣುವುದು ಐಕ್ಯದಮರತ್ವ.
ಎಲೆಕೆಳೆಯ ಅದಕೆ ಪೇಳಿದೆ ನೋಡು ನೋಡು ಜೀವನದಿ
ಮತ್ತೊಮ್ಮೆ ಆತ್ಮ ಪರಮಾತ್ಮ ನಾಗುವ ಆಗುಂಬೆಯನು ! !
ಸಾಫಲ್ಯವದೆ ಜೀವನದ ಗ:ರಿ ಎಂದು
ಆ- ಗುಂ- ಬೆ ಪದದೊಳೆ ಅ- ಉ- ಮ- ಗಳ ಸಮ್ಮಿಳನ
ಆತ್ಮ ಅಂತರಾತ್ಮನೊಳು ಬೆರೆಯ ಅದೆ ಮಹದಾನಂದ !
ಆನಂದ ರೂಪಮಮೃತಂ ರಸಂ ! !

——— ದಾಮುಶ

# ಮಾದಾರ ಚನ್ನಯ್ಯ

ವ ಶರಣರ ಕಥೆ--೨

- ಲೇ : ಬಿ. ನಂಜುಂಡಪ್ಪ.

ಚೋಳ ದೇಶದಲ್ಲಿ ಕರಿಕಾಲ ಚೋಳನೆಂಬ ದೊರೆಯಿದ್ದನು. ಆತನು ಪರಮ ದೈವಭಕ್ತ ಮತ್ತು ಸತ್ಯಪ್ರೇಮಿ. ಬಹಳ ಧರ್ಮದಿಂದ ರಾಜ್ಯ ಪರಿಪಾಲನೆ ಮಾಡುತ್ತಿದ್ದುದರಿಂದ, ಪ್ರಜೆಗಳು ಆತನನ್ನು ತಂದೆಯಂತೆ ಪ್ರೀತಿಸುತ್ತಿದ್ದರು.

ರಾಜಧಾನಿಯಲ್ಲಿ ಮಾದಾರ ಚನ್ನಯ್ಯನೆಂಬ ಒಬ್ಬ ಶಿವಭಕ್ತನಿದ್ದನು. ಆತನಿಗೆ ದೇವರಲ್ಲಿ ಬಹಳ ನಿಷ್ಠೆ. ಚನ್ನಯ್ಯನು ಜನ್ಮತಃ ಮಾದರನು: ಆದರೂ ಆತನ ಭಕ್ತಿಭಾವ ಮತ್ತು ಮುಕ್ತಿಯ ಕಾತುರತೆ ಬಹಳ. ಆದರೆ, ಆತನ ದೈವಭಕ್ತಿ ಬೂದಿ ಮುಚ್ಚಿದ ಕೆಂಡದಂತೆ ಯಾರಿಗೂ ಗೋಚರವಾಗುತ್ತಿರಲಿಲ್ಲ.

ಚನ್ನಯ್ಯ ಪ್ರತಿದಿನ ಪ್ರಾತಃಕಾಲ ಎದ್ದು, ಕಾಡಿಗೆ ಹೋಗುತ್ತಿದ್ದನು. ಅಲ್ಲಿ ನಿರ್ಮಲವಾದ ನದಿಯ ನೀರಿನಲ್ಲಿ ಸ್ನಾನಮಾಡಿ, ಘಮ ಘಮಿಸುವ ಮಲ್ಲಿಗೆಯ ಹೊದರಿನ ಕೆಳಗೆ, ತಣ್ಣಗಿರುವ ನೆರಳಿನಲ್ಲಿ ನುಣ್ಣಗಿರುವ ಮರುಳು ದಿಣ್ಣೆಯ ಮೇಲೆ ತಳಿರು ಹಾಸಿನ ಮೇಲೆ ಕುಳಿತು, ದೇವರ ಪೂಜೆಯಲ್ಲಿ ನಿರತನಾಗಿರುತ್ತಿದ್ದನು. ಆತನ ಮನಸ್ಸು ದೇವರಲ್ಲಿ ಅಚ್ಚೊತ್ತಿದಂತಿತ್ತು.

ಪೂಜೆ ಮುಗಿದ ಬಳಿಕ ಚನ್ನಯ್ಯ ತನ್ನ ನಿತ್ಯ ಕಾಯಕಕ್ಕೆ ಹೊರಡುತ್ತಿದ್ದನು. ಆತನ ಕಸಬು ಹುಲ್ಲು ಕೊಯ್ದು ಮಾರುವುದು. ಕಾಡಿನಲ್ಲಿ ಹುಲ್ಲು ಕೊಯ್ದು, ತನ್ನ ಎತ್ತಿನ ಮೇಲೆ ಹೇರಿ ತಂದು, ಅರಸನ ಕುದುರೆ ಶಾಲೆಯ ಮುಂದೆ ಮಾರುತ್ತಿದ್ದನು. ಹಾಗೆ ಹುಲ್ಲು ಮಾರಿ ಬಂದ ಹಣದಿಂದ ಆತನ ಜೀವನ ನಡೆಯಬೇಕಾಗಿತ್ತು. ಆತನದು ಬಹು ಸರಳ ಜೀವನ. ಆತನೂ ಆತನ ಹೆಂಡತಿಯೂ ಉಳ್ಳದನ್ನೇ ಅಮೃತ ಸಮಾನವಾಗಿ ಭಾವಿಸಿ, ದೇವರಿಗೆ ಅರ್ಪಿಸಿ, ಆ ಪ್ರಸಾದದಿಂದ ತೃಪ್ತರಾಗುತ್ತಿದ್ದರು. ಈ ರೀತಿ ಕೆಲವು ಕಾಲ ಕಳೆಯಿತು.

ಒಂದು ದಿನ ಚನ್ನಯ್ಯನು ಎಂದಿನಂತೆ ಕಾಡಿಗೆ ಹೋಗಿ ಬಹಳ ಭಕ್ತಿಯಿಂದ ದೇವರನ್ನು ಪೂಜಿಸಿ, ಹುಲ್ಲು ತಂದು, ಅದನ್ನು ಮಾರಿ, ಮನೆಗೆ ಬಂದನು. ಆ ವೇಳೆಗೆ ಊಟಕ್ಕೆ ಸಿದ್ಧವಾಗಿತ್ತು. ಆ ದಿನದ ಅಡುಗೆ, ಅಂಬಲಿ ಮತ್ತು ಕಾಳುಗಳ ಪಲ್ಯ. ಚನ್ನಯ್ಯ ಶುಚಿರ್ಭೂತನಾಗಿ, ಕುಳಿತು, ದೇವರನ್ನು ಧ್ಯಾನಿಸಿ, ಸಿದ್ಧವಾಗಿದ್ದ ಆಹಾರವನ್ನು ದೇವರಿಗೆ ನಿವೇದಿಸಿ, ಪ್ರಸಾದವನ್ನು ಊಟ ಮಾಡ ತೊಡಗಿದನು. ಭಕ್ತವತ್ಸಲನಾದ ಪರಮಾತ್ಮನು ಆತನ ನಿರಾಡಂಬರವಾದ ಸಹಜ ಭಕ್ತಿಗೆ ಮೆಚ್ಚಿ, ಚನ್ನಯ್ಯನಿಗೆ ಗೋಚರಿಸದಂತೆ, ತಾನೂ ಆತನ ಜೊತೆಯಲ್ಲಿ ಕುಳಿತು ಊಟ ಮಾಡಿದನು. ಚನ್ನಯ್ಯನೊಡನೆ ಮಾಡಿದ ಅಂಬಲಿಯ ಊಟ ಪರಮೇಶ್ವರನಿಗೆ ಬಹಳ ಆನಂದವನ್ನುಂಟು ಮಾಡಿತು.

ಈ ಕಡೆ, ಚೋಳರಾಜನು, ತನ್ನ ನಿತ್ಯ ನೇಮದಂತೆ, ಆ ಹರಿನ ಶಿವಾಲಯಕ್ಕೆ ಹೋಗಿ, ದೇವರನ್ನು ಷೋಡಶೋಪಚಾರದಿಂದ ಪೂಜಿಸಿದನು. ಪೂಜೆಯಾದ ಬಳಿಕ

ಬಗೆ ಬಗೆಯ ಭಕ್ಷ್ಯ ಭೋಜ್ಯಗಳನ್ನೂ ಮೃಷ್ಟಾನ್ನವನ್ನೂ ದೇವರಿಗೆ ನಿವೇದಿಸಿ, ಅ ಸ್ವೀಕರಿಸುವಂತೆ ಬೇಡಿಕೊಂಡನು. ಶಿವನು ಪ್ರತ್ಯಕ್ಷನಾಗಿ “ ಚೋಳರಸ, ಈಗ ನ ಹಸಿವಿಲ್ಲ. ಈಗ ಸ್ವಲ್ಪ ಹೊತ್ತಿನಲ್ಲಿ ಮಾದಾರ ಚನ್ನಯ್ಯನೊಂದಿಗೆ ಊಟ ಮಾಡಿದ್ದೆ ಆತ ಮಹಾಭಕ್ತ. ಆತನು ಅರ್ಪಿಸಿದ ಅಂಬಲಿಯ ರುಚಿ ಮೃಷ್ಟಾನ್ನದ ರುಚಿಗಿಂತ ಮಿಗಿಲಾಗಿತ್ತು. ನನಗೆ ಬಹಳ ಆನಂದವಾಯಿತು. ” ಎಂದು ಹೇಳಿದಹಾಗಾಯಿ ಚೋಳರಾಯನಿಗೆ ಇದೇನು ಸ್ವಪ್ನವೋ ಎನ್ನುವಷ್ಟು ಆಶ್ಚರ್ಯವಾಯಿತು.

ಅಂದಿನಿಂದ ಚೋಳರಾಜನ ಮನೋಭಾವವೇ ಬದಲಾಯಿಸಿತು. ಶಿವನ ಜೊತೆಂ ಊಟಮಾಡಿದ ಚನ್ನಯ್ಯನ ಮಹಿಮೆ ಎಂತಹುದಿರಬೇಕೆಂಬುದೇ ಆತನ ಯೋ ಯಾಯಿತು. ಅಂತಹ ಮಹಾಮಹಿಮನಾದ ಚನ್ನಯ್ಯನ ದರ್ಶನಭಾಗ್ಯವನ್ನು ಪ ಕೃತ ಕೃತ್ಯನಾಗಬೇಕೆಂದು ಅರಸನಿಗೆ ಹಂಬಲವುಂಟಾಯಿತು. ಕೂಡಲೇ ಆತನು ವಾರ ಸಮೇತ ಚನ್ನಯ್ಯನ ಬಳಿಗೆ ಕಾಲು ನಡಿಗೆಯಲ್ಲೇ ಹೊರಟನು. ದಾರಿಯುದ್ದ ಆತನಿಗೆ ಚನ್ನಯ್ಯನ ಯೋಚನೆಯೇ. ಚನ್ನಯ್ಯನ ಭಕ್ತಿಯ ಪ್ರಭಾವ ಸರಳ ನಿಷ್ಠೆ, ನಿರ್ಮಲ ಮನಸ್ಸು ಇವು ಅರಸನ ಕಣ್ಣಿಗೆ ಕಟ್ಟಿದಂತಿದ್ದವು.

ಅರಸನು ತನ್ನನ್ನು ಹುಡುಕಿ ಬರುತ್ತಿರುವುದು ಚನ್ನಯ್ಯನಿಗೆ ತಿಳಿಯಿತು. ಆದರೆ ಬರುತ್ತಿವುದರ ಕಾರಣ ಮಾತ್ರ ಆತನಿಗೆ ತಿಳಿಯಲಿಲ್ಲ. ಎಂದೂ ಬಾರದಿದ್ದ ಅರಸನುತ ಹೀನಕುಲದ ಬಡಪಾಯಿಯ ಮನೆಗೆ ಬರುವುದು ಬಹಳ ಆಶ್ಚರ್ಯಕರವಾಗಿ ತೋರು

ಅಷ್ಟರಲ್ಲಿ, ಅರಸನು ಚನ್ನಯ್ಯನ ಮನೆಗೆ ಪ್ರವೇಶಿಸಿದನು. ಚನ್ನಯ್ಯನನ್ನು ಕ ಕೂಡಲೇ ಅರಸನು ಆತನಿಗೆ ದೀರ್ಘದಂಡನಮಸ್ಕಾರ ಮಾಡಿ, ಆತನ ಪಾದಗಳ ಹಿಡಿದುಕೊಂಡನು. ಚನ್ನಯ್ಯನು ಬಹಳ ವಿನಯ ಭಯಭಕ್ತಿಗಳಿಂದ ಕುಗ್ಗಿ, ಕೈಮು “ಪ್ರಭು.ಏಳು ಏಳು........ನೀನು ಇಂಥಹ ಕೆಲಸ ಮಾಡುವುದೆ? ನೀನು ಇ ಬರಬೇಕಾದ ಕಾರಣವೇನಿತ್ತು? ನಾನು ಜಾತಿಯಲ್ಲಿ ಮಾದರ, ನೀನು ಅ ಕುಲವನ್ನು ನೋಡದೆ ಹೀಗೆ ಮಾಡುವುದೆ? ನನಗೇಕೆ ಅಷ್ಟು ಮನ್ನಣೆ? ನೀನು ಮ ಭಕ್ತ. ನಾನು ಪಾಮರ, ಬಿಡು, ನನ್ನ ಕಾಲು ಬಿಡು......” ಎಂದು ಹೇಳಿ ಹಿ ಸರಿದನು. ಅದಕ್ಕೆ ಚೋಳರಸನು “ ಸ್ವಾಮಿ, ದೇವರು ಒಲಿದ ಕುಲವೇ ಸತ್ಕುಲ, ಅ ಶ್ರೇಷ್ಠ ಜಾತಿ. ಪರಮೇಶ್ವರನೊಡನೆ ಊಟ ಮಾಡಿದ ನಿಮಗಿಂತಲೂ ಉತ್ತಮ ಕು ಜನರು ಮತ್ತಾರಿದ್ದಾರೆ ? ತಮ್ಮ ಪಾದ ಧೂಳಿ ನನ್ನ ಶಿರಸ್ಸಿನ ಮೇಲಿರಲಿ ” ಎ ವಿನಯದಿಂದ ಅರಿಕೆ ಮಾಡಿಕೊಂಡನು.

ಬಳಿಕ ಅರಸನು ಚನ್ನಯ್ಯನನ್ನು ಆನೆಯ ಮೇಲೆ ಅಂಬಾರಿಯಲ್ಲಿ ಕುಳ್ಳಿರಿಸಿ, ತಾನು ಕುದುರೆಯ ಮೇಲೆ ಕುಳಿತು, ಪರಿವಾರದೊಂದಿಗೆ, ಮರಳಿ ಶಿವಾಲಯಕ್ಕೆ ಹೊರಟ ದೇವಾಲಯ ಸಮೀಪಿಸುತ್ತಲೇ ಅರಸನು ಚನ್ನಯ್ಯನನಿಗೆ ಕೈ ಕೊಟ್ಟು ಆನೆಯಿ ಇಳುಹಿಸಿದನು. ಇಬ್ಬರೂ ದೇವಾಲಯವನ್ನು ಪ್ರವೇಶಿಸಿ, ದೇವರಿಗೆನಮಸ್ಕರಿಸಿ ಪ್ರಾರ್ಥಿ ಅವರ ಪ್ರಾರ್ಥನೆಗೆ ಮೆಚ್ಚಿ, ಪರಮೇಶ್ವರನು ಪ್ರತ್ಯಕ್ಷನಾದನು. ಹೂ ಮಳೆ ಸುರಿಯಿ ದುಂದುಭಿ ಕಹಳೆನಾದಗಳಾದುವು. ಪರಮೇಶ್ವರನು ಚೋಳರಾಜನನ್ನು ಬೀಳ್ಕೊಟ ಚನ್ನಯ್ಯನೊಡನೆ ಪುಷ್ಪಕವಿಮಾನದಲ್ಲಿ ಕುಳಿತು ಕೈಲಾಸಕ್ಕೆ ತೆರಳಿದನು. ಚನ್ನಯ್ಯನಿಗೆ ಗಣಪದವಿ ದೊರೆಯಿತು.

# ಕ್ಷೇತ್ರವಾರ್ತೆ

ಪಿ. ಎನ್. ಚಂದ್ರಶೇಖರಯ್ಯ

ದಿನಾಂಕ **11-10-88** ರಂದು ರಾಷ್ಟ್ರೀಯ ಮಟ್ಟದ ನಾಲ್ಕು ಪಕ್ಷಗಳ ವಿಲೀನ ಮತ್ತು '**ಜನತಾದಳ**' ದ ಉದಯದ ಅಪೂರ್ವ ಸಮಾವೇಶ ಬೆಂಗಳೂರಿನ ಅರಮನೆ ಆವರಣದಲ್ಲಿ ಸೇರಿದ ಸಂದರ್ಭ. ಈ ಐತಿಹಾಸಿಕ ಸಮಾರಂಭಕ್ಕೆ ನಾಡಿನಾದ್ಯಂತ ಅನೇಕ ಅಭಿಮಾನಿಗಳು ಬೆಂಗಳೂರಿಗೆ ಪ್ರಯಾಣ ಮಾಡಿದರು. ಈ ಸಮಾರಂಭಕ್ಕೆ ಉತ್ತರ ಕರ್ನಾಟಕದ ಕಡೆಯಿಂದ ಬಂದ ಸಾವಿರಾರು ಮಂದಿ ಶ್ರೀ ಮಠಕ್ಕೆ ಭೇಟಿ ಕೊಟ್ಟ ಸನ್ನಿವೇಶ ಅತ್ಯಂತ ಸ್ಮರಣೀಯವಾದುದು.

ದಿನಾಂಕ. 10-10-88 ರಂದು ಸಂಜೆ 8-10 ಬಸ್ಸುಗಳಲ್ಲಿ ಬಂದ ಜನ ರಾತ್ರಿ ಶ್ರೀ ಮಠದಲ್ಲಿಯೇ ವಾಸ್ತವ್ಯಮಾಡಿದರು. ಬೆಳಗಿನ ಜಾವ 3-30 ಘಂಟೆಗೆ ಬಸ್ಸುಗಳು ಶ್ರೀ ಮಠಕ್ಕೆ ಬರಲು ಪ್ರಾರಂಭಿಸಿದುವು. ಬೆಳಗಿನ ಸ್ನಾನ ಪೂಜಾದಿಗಳು ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಯ ದರ್ಶನ' ಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳವರ ದರ್ಶನಾಶೀರ್ವಾದ ಮತ್ತು ಶ್ರೀ ಮಠದ ಮಹಾದಾಸೋಹ ದಲ್ಲಿ ಪ್ರಸಾದ ಮತ್ತು ಚಹಾ ಸ್ವೀಕಾರ. ಸುಮಾರು 250 ಬಸ್ಸುಗಳಲ್ಲಿ, ಸ್ವಂತ ವಾಹನಗಳಲ್ಲಿ ಬಂದ ಸು. 14 ರಿಂದ 15 ಸಾವಿರದ ವರೆವಿಗೂ ಬಂದ ಮಂದಿಯಾನ್ನು ನೋಡಿದವರಿಗೆ ಶ್ರೀ ಮಠದಲ್ಲಿ ಒಂದು ವಿಶೇಷ ಜಾತ್ರೆ ಸನ್ನಿವೇಶ, ಶ್ರೀ ಮಠದ ಆವರಣದಲ್ಲಿರುವ ಪುಷ್ಕರಿಣಿಯ ಸುತ್ತಲ ಸ್ಥಳಗಳಲ್ಲಿ ಸ್ನಾನಮಾಡುವ ದೃಶ್ಯ ಶ್ರೀ ಮಠದ ಒಳಗೆ ಹೊರಗೆ ವಾಹನಗಳು ನಿಂತಕ್ರಮ ಎಲ್ಲವೂ ಚೇತೋಹಾರಿಯಾಗಿತ್ತು. ಈ ಹಿಂದೆ ಕಳೆದವರ್ಷ ಜನೋತ್ಸವ ಸಂದರ್ಭ ಮತ್ತು ಜಿಲ್ಲಾ ಪರಿಷತ್ತು ಮತ್ತು ಮಂಡಲ ಪಂಚಾಯ್ತಿ ಸದಸ್ಯರ ಸಮಾವೇಶಗಳಲ್ಲಿಯೂ ಜನತೆ ಬಂದಿದ್ದರಾದರೂ ಅದರ ಎರಡು ಮೂರು ಪಟ್ಟು ಅಧಿಕ ಸಂಖ್ಯೆಯಲ್ಲಿ ಬಂದು ಸೇರಿದರು. ಎಲ್ಲರಿಗೂ ಸ್ವತಃ ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳವರೇ ನಿಂತು ಪ್ರಸಾದ ನೀಡಿಸಿದರು. ಅಂದು ಮಧ್ಯಾಹ್ನ 11.30 ರ ವರೆಗೂ ದಾಸೋಹ ವ್ಯವಸ್ಥಿತವಾಗಿ ನಡೆಯಿತು. ಉಪಾಧ್ಯಾಯರು, ವಿದ್ಯಾರ್ಥಿಗಳು ಆಡಳಿತ ವರ್ಗ ಮತ್ತು ಸಿಬ್ಬಂದಿಯವರ ಉತ್ಸಾಹಭರಿತ ಸೇವೆ ಸ್ಮರಣೀಯವಾದುದು.

ಶತಮಾನಗಳಷ್ಟು ಹಳೆಯದಾದ ಶ್ರೀ ಮಠದ ದಾಸೋಹಕ್ಕೆ ಈ ದಿಡೀರ್ – ದಾಸೋಹ ಹೊಸದೇನಲ್ಲ. ಸಮಯದ ನಿಗಧಿಯಿಲ್ಲದೆ ಇಡೀ ರಾತ್ರಿಯೆಲ್ಲಾ ದಾಸೋಹ ನೀಡಿದ ಉದಾಹರಣೆಗಳುಂಟು ಪಕ್ಷ ಸಂಗಡಗಳ ಭೇದವಿಲ್ಲದೆ ರಾಜಧಾನಿಲ್ಲಿ

ನಡೆಯುವ ಬೃಹತ್ ರೈತ ಮೇಳ ಸಾಮೂಹಿಕ ಬೃಹತ್ ರ್‍ಯಾಲಿ ಮುಂತಾದ ಸಂದರ್ಭ ದಲ್ಲಿ ದಾಸೋಹ ನೀಡಿದೆ. ಅಂತೆಯೇ ಶ್ರೀ ಮಠ. ತ್ರಿವಿಧ ದಾಸೋಹಕ್ಕೆ ಹೆಸರಾದುದು

ದಿನಾಂಕ 11.10-88 ರಿಂದ 2-10-88 ರ ವರೆಗೆ ವಿಜಯದಶಮಿ ಪ್ರಯುಕ್ತ ಶ್ರೀ ಮಠದಲ್ಲಿ ವಿಶೇಷ ಪೂಜಾ ಕಾರ್ಯಕ್ರಮಗಳನ್ನು ಪ್ರತಿವರ್ಷದಂತೆ ಸಂಪ್ರದಾಯ ವನ್ನನುಸರಿಸಿ ಆಚರಿಸಲಾಯಿತು.

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಗೆ ಮಹಾನ್ಯಾಸ ಪೂರ್ವಕ ರುದ್ರಾಭಿಷೇಕವನ್ನು ಬೆಳಗಿನ ಸಮಯದಲ್ಲೂ ಸಾಯಿಂಕಾಲ ರುದ್ರಾಭಿಷೇಕ, ಪಟ್ಟಾಧಿಕಾರ ಪೂರ್ವಕ ರಾಜೋಪಚಾರವನ್ನು ಪ್ರತಿನಿತ್ಯ ಮಾಡಲಾಗಿತ್ತು.

ವಿಜಯದಶಮಿ ಅಂಗವಾಗಿ ಸರಸ್ವತೀ ಪೂಜೆ ದುರ್ಗಾಷ್ಟಮಿ ದಿವಸ ದುರ್ಗಾಪೂಜೆ, ಪೂಜ್ಯ ಗಂಗಾ ದೇವಿಯವರಿಗೆ ಲಲಿತ ಸಹಸ್ರ ನಾಮಾ ವಳಿ ಪೂಜಾ, ಶ್ರೀ ಸಿದ್ಧಲಿಂಗೇಶ್ವರರಿಗೆ ಸಹಸ್ರ ಬಿಲ್ವಾರ್ಚನಾ ಪೂಜೆ ನಡೆಸಲಾಯಿತು.

ದಿನಾಂಕ 19-10-88 ಧ್ವಜಾರೋಹಣ ಆಯುಧ ಪೂಜಾ ಕಾರ್ಯ ಕ್ರಮ ವಿಶೇಷ ರೀತಿಯಿಂದ ಜರುಗಿದುವು. 20-10-88 ರ ವಿಜಯದಶಮಿ ಯಂದು ಶ್ರೀ ಶ್ರೀ ಗಳವರಿಗೆ ಭಕ್ತರ ಭಕ್ತಿಕೈಂಕರ್ಯ ದೇವರ ಉತ್ಸವ ಉಪನ್ಯಾಸ ಸ್ವಾಮಿಗೆ ರಾಜೋಪಚಾರ ಶಮೀ ಪೂಜೆ ಮತ್ತು ಬನ್ನಿಮರ ಕಡಿಯುವ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿತ್ತು.

ಶ್ರೀ ಮಠದ ವಿಶೇಷಾಧಿಕಾರಿಗಳಾದ ವಿದ್ವಾನ್ ಕೆ. ಎಂ. ರೇವಣ್ಣಸಿದ್ಧಯ್ಯ ನವರು ಉಪನ್ಯಾಸ ಮಾಡುತ್ತಾ ವಿಜಯದಶಮಿ ಮತ್ತು ಆಯುಧ ಪೂಜೆಗಳ ಮಹತ್ವ ಗಳ ಬಗ್ಗೆ ತಿಳಿಸಿದರು. ಪೂಜ್ಯರು ತಮ್ಮ ಆಶೀರ್ವಚನದಲ್ಲಿ ದಸರಾ ಮಹೋತ್ಸವಕ್ಕೆ ಪೌರಾಣಿಕದ ಹಲವು ಹಿನ್ನೆಲೆಗಳಿದ್ದರೂ ತಾತ್ವಿಕ ಮತ್ತು ಸಾಂಸ್ಕೃತಿಕ ಮಹತ್ವವುಳ್ಳ ಭಾರತೀಯ ಹಬ್ಬಗಳಲ್ಲಿ ಒಂದು ಶಕ್ತಿಯ ಉಪಾಸನೆ ಈ ಹಬ್ಬದ ವಿಶೇಷ ಎಂದರು.

ಈ ಸಮಾರಂಭದಲ್ಲಿ ಸಾವಿರಾರು ಭಕ್ತರು ಮತ್ತು ಅನೇಕ ಮಠಾಧಿಪತಿಗಳು ಉಪಸ್ಥಿತರಿದ್ದರು.



# ಗ್ರಾಮಾಂತರ ಬಸವ ಜಯಂತಿ-202

ಹೆಚ್. ವಿ. ವೀರಭದ್ರಯ್ಯ, ಉಪನ್ಯಾಸಕರು ಕನ್ನಡ ವಿಭಾಗ, ಸಿದ್ಧಗಂಗಾ ಕಾಲೇಜು ತುಮಕೂರು

**ಆತ್ಮೀಯ ಶರಣ ಬಂಧು,**

ಆಕ್ಷೇಪಣೆ ಮಾಡುತ್ತೀಯಲ್ಲವೇ? ಹಳೆಯ ಸುದ್ದಿಯನ್ನು ಪ್ರಸ್ತಾಪಿಸುತ್ತಿದ್ದೇನೆಂದು, ಹಳಸಲಾಯಿತೆಂದು. ಹಳಸಲೂ ಸಹ ಶಿಳಿಬೆಳಕು ನೀಡುವುದಾದರೆ ಆದೇಕೆ ಬೇಡವೆನ್ನಬೇಕು. ಬಸವಣ್ಣನಾಗಲಿ ಅವನ ಪರವಾದ ವಿಚಾರ ಚಿಂತನ – ಮಂಥನಗಳಾಗಲಿ ಎಂದಿಗಾದರೂ ಹಳಸಲಾಗಬಹುದೆ? ವರದಿ ಮಾಡುತ್ತಿರುವುದರ ಬಗೆಗೆ ನಿನ್ನ ಆಕ್ಷೇಪಣೆ ಇರುವುದಾದರೆ ಅದಕ್ಕೂ ವಿನಮ್ರನಾಗಿ ಅರಿಕೆ ಮಾಡಿಕೊಳ್ಳಲಿಚ್ಛಿಸುತ್ತೇನೆ. ಪರಮ ಪೂಜ್ಯರು ನಡೆಸಿರುವ ಮಹಾಮಣಿಹದ ಒಂದೊಂದು ಗ್ರಾಮದ ಬಸವ ಜಯಂತಿಯನ್ನು ಕುರಿತು ಬರೆಯಲೂ 'ಸಿದ್ಧಗಂಗಾ' ಮಾಸಿಕಕ್ಕೆ ಒಂದೊಂದು ತಿಂಗಳು ಕಾಯಬೇಕು. ಪೂಜ್ಯರ ಸೇವೆಯ ವೇಗಕ್ಕೆತಕ್ಕಂತೆ ಓಡಬೇಕೆಂಬ ಆಸೆ ಇದೆಯಾದರೂ ಒಂದು ಚೌಕಟ್ಟಿಗೆ ಒಳಪಟ್ಟು, ಕಾಲಕ್ಕೆ ಬದ್ಧವಾಗಿ ಬರೆಯಬೇಕಾಗುತ್ತದೆ. ಕಳೆದವರ್ಷದಲ್ಲಿ ನಡೆದ ಜಯಂತಿಯ ವರದಿಯನ್ನು ಈ ವರ್ಷಕೊಡಬೇಕಾಗಿದೆ, ವರ್ಷಕ್ಕೆ ಹನ್ನೆರಡು 'ಸಿದ್ಧಗಂಗಾ' ಪ್ರಕಟವಾಗುವುದು. ಗ್ರಾಮಾಂತರ ಬಸವಜಯಂತಿ ವರ್ಷಕ್ಕೆ ಹದಿನೈದರಿಂದ ಇಪ್ಪತ್ತರವರೆವಿಗೆ ನಡೆಯುತ್ತವೆ ಎರಡು ಮೂರು ಕಾರ್ಯಕ್ರಮಗಳ ವರದಿಯನ್ನು ಒಂದೇ ಸಂಚಿಕೆಯಲ್ಲಿ ಕೊಡಬಹುದಲ್ಲ ಎನ್ನುತ್ತೀಯೇನು? ಆದರೆ ಒಂದೊಂದು ಗ್ರಾಮದ್ದೂ ತನ್ನದೇ ಆದ ವೈವಿಧ್ಯ ವೈಶಿಷ್ಟ್ಯಗಳನ್ನು ಒಳಗೊಂಡಿರುತ್ತದೆ. ಅದಕ್ಕಾಗಿಯೇ ಬಿಡಿ ಬಿಡಿಯಾಗಿ ಪ್ರಕಟಿಸುವ ಯೋಜನೆ ರೂಪಿಸಿಕೊಳ್ಳಲಾಗಿದೆ.

ದಿನಾಂಕ 18-6-87ರಂದು ಕನಕಪುರ ತಾ|| ಶಿವನಹಳ್ಳಿ ಪುಣ್ಯ ಗ್ರಾಮದಲ್ಲಿ ಬಸವಜಯಂತಿ. ಮಧ್ಯಾಹ್ನ ಮೂರು ಘಂಟೆಗೆ ಕಾರ್ಯಕ್ರಮ ಆರಂಭವಾಯಿತು. ವಿದ್ವಾನ್ ಮಲ್ಲವೀರಯ್ಯನವರು ಮತ್ತು ಸಂಗಡಿಗರು ಭಕ್ತಿ ಶ್ರದ್ಧೆಗಳಿಂದ ಸಮಾರಂಭದ ಏರ್ಪಾಡು ಮಾಡಿದ್ದರು. ಶ್ರೀ ಮಠದ ಹಳೆಯ ವಿದ್ಯಾರ್ಥಿಗಳಾದ ಶ್ರೀ ಮಲ್ಲವೀರಯ್ಯನವರು ಸ್ವಾಗತಿಸುತ್ತ ಪರಮ ಪೂಜ್ಯ ಸೇವಾ ಜೀವನವನ್ನು ನೆರೆದಿದ್ದ ಮಹಾಸಭೆಗೆ ಪರಿಚಯ ಮಾಡಿಕೊಟ್ಟರು. ಶಿವನಳ್ಳಿ ಗ್ರಾಮದ ಪ್ರಮುಖರು ಪೂಜ್ಯ ಶ್ರೀ ಶ್ರೀಗಳಿಗೆ ಮಾಲಾರ್ಪಣೆ ಮಾಡಿದರು.

ಬಸವಣ್ಣನವರು ಮನಕುಲದ ದೀಪಕರು, ಅಖಂಡ ಮಾನವತಾ ವಾದಿಗಳು. ಗುರುಲಿಂಗ ಜಂಗಮ ಪ್ರೇಮಿಗಳು, ಸಕಲ ಜೀವಂಗೆ ಲೇಸನೇ ಬಯಸಿದ ಶರಣ ಶ್ರೇಷ್ಠರು, ಅವರ ಸಂದೇಶಗಳಿಂದು ಅಗತ್ಯವಾಗಿದೆ ಎಂಬುದಾಗಿ ಮಾತನಾಡುತ್ತ ಕನಕಪುರ ದೇಗುಲ ಮಠಾಧ್ಯಕ್ಷರಾದ ಪೂಜ್ಯ ಶ್ರೀ ಶ್ರೀ ಮುಮ್ಮಡಿ ನಿರ್ವಾಣಸ್ವಾಮಿಗಳು ಸಿದ್ಧಗಂಗಾ ಶ್ರೀಗಳಿಂದು ಕೈಗೊಂಡಿರುವ ಬಸವ ದರ್ಶನ ಮಹಾಯಾತ್ರೆಯಿಂದ

ಗ್ರಾಮೀಣ ಬಂಧುಗಳ ಜೀವನದಲ್ಲಿ ಹೊಸ ಚೈತನ್ಯ ಬರುವಂತಾಗಲಿ ಎಂದು ಸಮಾರಂಭವನ್ನು ಉದ್ಘಾಟಿಸಿದರು.

ಗ್ರಾಮೀಣ ಬಂಧುಗಳು ಬಸವಣ್ಣನವರನ್ನು ಎದೆಗಪ್ಪಿಕೊಂಡವರು. ಅವರ ಸಂದೇಶವನ್ನು ಸದ್ದುಗದ್ದಲವಿಲ್ಲದೆ, ಪ್ರಚಾರ ಪ್ರದರ್ಶನಗಳ ಕೃತ್ರಿಮಕ್ಕೆ ಮಾರು ಹೋಗದೆ ಅನುದಿನದ ಬದುಕಿನಲ್ಲಿ ಅನುಸರಿಸುತ್ತ ಬಂದಿರುವುದನ್ನು ಅವರ ಎದೆಯಾಳದಿಂದ ಒಡಮೂಡಿ ಬಂದ ಸರಳ ಸುಂದರ ತ್ರಿಪದಿಗಳ ಮೂಲಕ ಬಿಡಿಸಿ ತೋರಿಸಿದರು ಶ್ರೀ ಹೆಚ್. ವಿ. ವೀರಭದ್ರಯ್ಯನವರು.

ಬಸವಣ್ಣ ಒಂದು ಕೋಮಿಗೆ. ಜಾತಿಗೆ ಕುಲಕ್ಕೆ ಸೇರಿದವನಲ್ಲ, ಕಾಲ ದೇಶಗಳಿಗೆ ಸೀಮಿತರಾದವರೂ ಅಲ್ಲ. ಸಾರ್ವಕಾಲಿಕ; ಸಾರ್ವತ್ರಿಕವಾಗಿ ವಿಶ್ವದೆತ್ತರ ಬಿತ್ತರಕ್ಕೆ ಬೆಳೆದು ನಿಂತವರವರು. ಅವರೊಬ್ಬ ಆಧ್ಯಾತ್ಮ ವಿಜ್ಞಾನಿ, ಸಂಸಾರಿ ಶಿವಯೋಗಿ, ಲೋಕೋತ್ತರ ಮೂರ್ತಿ ಲೌಕಿಕವನ್ನ ಶ್ರದ್ಧೆಯಿಂದ ಗೌರವಿಸುತ್ತಲೇ ಪರಂಪರಾಗತವಾಗಿ ಬೆಳೆದು ಬಂದಿದ್ದ ಅಲೌಕಿಕ ಕಲ್ಪನೆಗೆ ಹೊಸದೃಷ್ಟಿ, ಹೊಸ ತಿರುವು ತಂದು ಕೊಟ್ಟವರು. ವ್ಯಕ್ತಿಯ ಅಂತರಂಗ ಶೋಧನೆಗೆ ಕಾಯಕದ ಕಮ್ಮಟವನ್ನು ಸಿದ್ಧಗೊಳಿಸಿಕೊಟ್ಟರಲ್ಲದೆ, ಸಾಮಾಜಿಕ ಬದಲಾವಣೆಗೂ ದಾರಿ ತೋರಿದರು. ಕ್ರಿಯಾ-ಶೀಲವ್ಯಕ್ತಿ, ಕಾರ್ಯನಿಷ್ಠನಾದಾಗ ಕೈಲಾಸ ಸೃಷ್ಟಿಯಾಗುವುದರಲ್ಲಿ ಸಂದೇಹವಿಲ್ಲ. ಭಗವಾನ್ ಬಸವಣ್ಣನವರು ಭಕ್ತರಾಗಿದ್ದುಕೊಂಡೇ ಗುರು ಲಿಂಗ ಜಂಗಮರ ಸೇವೆ ಮಾಡುತ್ತಲೇ ಎಲ್ಲರ ಹೃದಯವನ್ನು ಗೆದ್ದರು. ಸೇವೆ-ದಾಸೋಹಗಳಿಗೆ ಭಾಷ್ಯವಾದರು. ತ್ಯಾಗದ ಮೂಲ ಬೀಜ ಸೇವೆಯಲ್ಲಿ ಕಾಣುತ್ತದೆ ಎಂಬುದನ್ನು ತೋರಿಸಿಕೊಟ್ಟರು. ಅದರಂತೆ ವಸ್ತುನಿಷ್ಠವಾಗಿ ಆಲೋಚಿಸಿದವರು ವಿರಳ. Practical thinker ಬಸವಣ್ಣ ಯಾವುದೇ ದೃಷ್ಟಿಯಿಂದ ನೋಡಿದರೂ ಅವರಲ್ಲಿ ಹೊಸತನ ಹೊಳೆಯುತ್ತದೆ ನಮಗೆ ಅವರ ಅಗತ್ಯ ಕಾಣುತ್ತದೆ. ದೀನರ, ದಲಿತರ, ಸ್ತ್ರೀಯರ, ಪಾಪಿಗಳ, ಅಜ್ಞಾನಿಗಳ, ಬಗೆಗೆ ಅವರಿಗಿದ್ದ ಕಳಕಳಿ ಅಪಾರ. ಅವರ ವಚನಗಳಲ್ಲಿ ಅದು ವ್ಯಕ್ತವಾಗಿದೆ. ಸ್ವತಂತ್ರ ಭಾರತಕ್ಕೆ, ದೇಶದ ಯುವಜನಾಂಗಕ್ಕೆ ಬಸವಣ್ಣನವರ ಮಾರ್ಗ ಉತ್ತಮ ಭವಿಷ್ಯವನ್ನು ತೋರುತ್ತಿದೆ ಎಂಬುವುದಾಗಿ ಅಧ್ಯಕ್ಷಸ್ಥಾನದಿಂದ ಪರಮ ಪೂಜ್ಯರು ಆಶೀರ್ವಚನ ನೀಡಿದರು.

ರಾತ್ರಿ ಜಗಜ್ಯೋತಿ ಬಸವೇಶ್ವರ ನಾಟಕ ಪ್ರದರ್ಶನ ಏರ್ಪಡಾಗಿತ್ತು, ಶಿವನಳ್ಳಿ ಸುತ್ತಮುತ್ತಿನ ಹತ್ತುಹಳ್ಳಿಯ ಗಾಮೀಣ ಜನತೆ ಬೆಳ್ಳಂ ಬೆಳಕಾಗುವವರೆಗೆ ನಾಟಕ ನೋಡಿ ಸಂತೋಷಿಸಿದರು. ಕಕ್ಕಯ್ಯ ಶಿವನಾಗಮಯ್ಯಗಳ ದೃಶ್ಯವನ್ನು ಕಂಡ ಕನಕಪುರದ ವ್ಯಾಪರಿಯೊಬ್ಬರು ಹೊಸದಾಗಿ ಮಾಡಿಕೊಂಡಿರುವ ಬದಲಾವಣೆಯುಲ್ಲವೇ ಎಂದು ವರದಿಗಾರರನ್ನು ಕೇಳಿದಾಗ ಹೌದು ಎನ್ನಬೇಕಾಯಿತು. ಶಿವನಹಳ್ಳಿ ಕೋಳಿಗಳೂ ಸಹ ಬಸವ ಸಂದೇಶ ಸಾರುತ್ತಿರುವಂತೆ ಮುಂಜಾವದಲ್ಲಿ ಕೂಗುತ್ತಿದ್ದವು.

# ಗುರುದೇವ ( ಕವಿ ರವೀಂದ್ರರ ಋಣ )

ಸಂಜೆಯ ಸೂರ್ಯನು ಗೋದಾವರಿ ನದಿಯತೀರದಲ್ಲಿ ಶಾಂತವಾಗಿ ಪಡುವಣ ದೆಸೆಗಿಳಿದಿದ್ದನು. ನದಿಯ ನೀರಿನ ಮೇಲೆ ಬೀಸುತ್ತಿದ್ದ ತಂಗಾಳಿಯು ಮೃದು ಸೇಚನದಿಂದ ದೇಹ ಪುಲಕಿತವಾಗುತಿತ್ತು. ಗೂಡಿಗೆ ಹಿಂದಿರುಗುತ್ತಿದ್ದ ಶುಕಪಿಕಗಳ ಕಲಗಾನವು ಗೋಕುಲದ ಸಂಸಾರದಂತೆ ಹಿತಕರವಾಗಿದ್ದಿತು. ಸಿಕ್ಕರ ಗುರು ಗೋವಿಂದ ಸಿಂಹನು ನದಿತೀರದಲ್ಲಿ ಬಾಗಿದಮರವೊಂದರ ನೆರಳಿನಲ್ಲಿದ್ದ ಬಂಡೆಯ ಮೇಲೆ ಕುಳಿತು ಪ್ರಕೃತಿಯಲ್ಲಿ ತನ್ನ ಧ್ಯಾನಮಗ್ನವಾದ ಮನಸ್ಸನ್ನು ಲೀನಗೊಳಿಸಿದ್ದನು. ಇಳಿಬದ್ದ ಮುಂಗುರುಳು ಮುಖದ ಮೇಲಾಡುತಿದ್ದವು. ವಾತವರಣದಲ್ಲಿ ನಿಸ್ತಬ್ಧ ನೀರವತೆ ಮಾಡುತಿತ್ತು.

ಪ್ರಾಪಂಚಿಕ ಸುಖ ಸರ್ವಸ್ವವನ್ನೂ ಅನುಭವಿಸಿ ಸಂಸಾರದಲ್ಲಿ ಜಿಹಾಸೆಯನ್ನು ಅನುಭವಿಸಿದ ಆಗರ್ಭ ಶ್ರೀಮಂತರನೊಬ್ಬನು ಉಡಿಗೆ ತೊಡಿಗೆಗಳಿಂದ ಅಲಂಕೃತನಾಗಿ ಗುರುದೇವನ ಬಳಿಗೆ ಬಂದನು ಧ್ಯಾನಚಿತ್ತನಾದ ಗುರುವು ತುಸು ಹೊತ್ತಿನ ನಂತರ ತಪಸ್ಸಿನ ಶಾಂತಿಯನ್ನೊಳಗೊಂಡು ತನ್ನ ಮುಖಮುದ್ರೆಯನ್ನು ಅತ್ತ ತಿರುಗಿಸಿದನು. ಶ್ರೀಮಂತನು ದೀರ್ಘ ದಂಡ ಪ್ರಣಾಮಗಳನ್ನು ಗುರುಚರಣದಲ್ಲಿ ಅರ್ಪಿಸಿ ಅನತಿ ದೂರದಲ್ಲಿ ನಿಂತನು. ಇಬ್ಬರೂ ಮೌನದಿಂದಿದ್ದರು. ಗುರುವು ತನ್ನ ಪ್ರಶ್ನಾರ್ಥಕ ದೃಷ್ಟಿಯನ್ನು ಆತನ ಕಡೆಗೆ ಬೀರಿ ದಿಟ್ಟಿಸಿದನು. ಶ್ರೀಮಂತನು ಬಹು ಭಯ ಭಕ್ತಿಯಿಂದ ತಾನು ಸಂಸಾರದಲ್ಲಿ ಅನುಭವಿಸಿದ ನಿಸ್ಸಾರತೆಯನ್ನು ನಿರೂಪಿಸಿ ಜೀವನ್ಮುಕ್ತಿಯ ಮಾರ್ಗವನ್ನು ಬೋಧಿಸಬೇಕೆಂದು ಪ್ರಾರ್ಥಿಸಿದನು.

ಗುರುದೇವನು ಆಗುಂತಕನನ್ನು ಐಶ್ವರ್ಯ ಸರ್ವಸ್ವವನ್ನೂ ತ್ಯಾಗಮಾಡಿ ಬಾ ಎಂದು ನುಡಿದು ಕಳುಹಿಸಿ ಕೊಟ್ಟನು.

ಕೆಲದಿನಗಳ ನಂತರ ಅದೇ ಗೋದಾವರೀ ತೀರದಲ್ಲಿ ಗುರುದೇವನು ಸಂಧ್ಯಾಕಾಲದ ಪ್ರಾರ್ಥನೆಯಲ್ಲಿ ತೊಡಗಿದ್ದನು ಶ್ರೀಮಂತನು ಅಲ್ಲಿಗೆ ಬಂದನು. ಗುರುವಿನ ದೃಷ್ಟಿ ಆಕಡೆ ಹೊರಳಿದಾಗ ಆತನು ಪ್ರಣಾಮಗಳನ್ನರ್ಪಿಸಿ ರತ್ನ ಖಚಿತವಾದ ಸ್ವರ್ಣ ನಿರ್ಮಿತ ಕೈ ಬಳೆಗಳೆರಡನ್ನು ಗುರು ಚರಣದ ಬಳಿಯಿಟ್ಟು ಬದ್ಧಾಂಜಲಿಯಾಗಿ ನಿಂತು „ ಗುರುದೇವ ! ಇದೇ ನನ್ನ ಐಶ್ವರ್ಯದ ಸಾರ ಸರ್ವಸ್ವ ; ಅದನ್ನು ಗುರುಕಾಣಿಕೆಯಾಗಿ ತಮ್ಮ ಚರಣಗಳಿಗೆ ನಿವೇದಿಸಿದ್ದೇನೆ ಎಂದು ನುಡಿದನು.

ಗುರುವಿನ ತುಟಿಗಳಲ್ಲಿ ನಸುನಗೆ ಆಗಸದ ಮಿಂಚಿನಂತೆ ಮೂಡಿಮರೆಯಾಯಿತು. ರತ್ನ ಖಚಿತವಾದ ಎರಡು ಕಡೆಗಳಲ್ಲಿ ಒಂದನ್ನು ಎತ್ತಿ ಕೈಯಲ್ಲಿ ಹಿಡಿದು ಆಡಿಸುತ್ತಾ ತಿರುಗಿಸುತ್ತಿದ್ದರು. ಅದು ಕೈಯಿಂದ ಜಾರಿ ಬಂಡೆಯ ಮೇಲುರುಳಿ ನದಿಯ ಅತುಲ ಜಲರಾಶಿಯಲ್ಲಿ ಮುಳುಗಿ ಹೋಯಿತು. ಶ್ರೀಮಂತನು ಬೆಚ್ಚಿ, ಗಾಬರಿಯಿಂದ ‹ಗುರು ದೇವ ನನ್ನ ಸರ್ವಸ್ವವೂ ಹಾಳಾಗಿ ಹೋಯಿತು ! ಇನ್ನೇನು ಗತಿ ಎಂದು ಹಲ ಬಿದನು. ಗುರುದೇವನ ಮುಖಮುದ್ರೆ ಪ್ರಶಾಂತವಾಗಿತ್ತು.

ಶ್ರೀಮಂತನು ಅದೇ ಕಾತರಿಕೆಯಿಂದ ‹ರತ್ನ ಖಚಿತವಾದ ಅಮೂಲ್ಯಕಡಗವ ನೀರು ಪಾಲಾಯಿತು. ಅದು ಬಿದ್ದ ಸ್ಥಳವನ್ನು ತೋರಿಸಿ ಬೇಗ ತೆಗೆಯುತ್ತೇನೆ ಎಂದನು. ಗುರುವು ಅದೇ ಶಾಂತ ಭಾವದಿಂದ ಇನ್ನೊಂದು ಬಳೆಯನ್ನೂ ಕೈಯಲ್ಲಿ ಎತ್ತಿಹಿಡಿದು ‹ಅದೋ ನೋಡು; ಮೊದಲ ಬಳೆಅಲ್ಲಿ ಬಿದ್ದಿದೆ, ಎಂದು ಇದನ್ನೂ ಗೋದಾವರೀ ನದಿಯಲ್ಲಿ ಎತ್ತಿ ಬಿಸಾಡಿ ಬಿಟ್ಟನು !

    

## ನಿರಾಧಾರ ಪ್ರಕಟಣೆಗಾಗಿ ಸಂಚು ಪತ್ರಿಕೆಗೆ 50,000 ರೂ ದಂ

ಅಭಿಮಾನಿ ಪ್ರಕಾಶನ ಸಂಸ್ಥೆ ನಿಯಮಿತ, ರಾಜಾಜಿನಗರ ಬೆಂಗಳೂರು ಇವರಿಂದ ಪ್ರಕಟವಾಗುತ್ತಿರುವ ತಾ॥ 16-7-86ರ ಸಂಚು ವಾರಪತ್ರಿಕೆಯಲ್ಲಿ ಶ್ರೀ ಸಿದ್ಧ ಗಂಗಾ ಮಠ ಹಾಗೂ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಬಗ್ಗೆ ಅಸತ ಸುಳ್ಳು-ನಿರಾಧಾರ ಸುದ್ಧಿಯನ್ನು ಪ್ರಕಟಪಡಿಸಿದ್ದರ ಮೇರೆಗೆ ಶ್ರೀ ಕ್ಷೇತ್ರವ ತಾ॥ 19-8-86 ರಂದು ಬೆಂಗಳೂರಿನ 17 ನೇ ನಗರ ಸಿವಿಲ್ ಮತ್ತು ಸೆಷನ ನ್ಯಾಯಾಲಯದಲ್ಲಿ ಮಾನನಷ್ಟಮೊಕದ್ದಮೆ ಹೂಡಿತ್ತು. ತಾ. 19-7-88 ರಂದು ಈ ಮೊಕದ್ದಮೆಗೆ ಸಂಬಂಧಿಸಿದಂತೆ ನ್ಯಾಯಾಧೀಶರು ತೀರ್ಪು ನೀಡುತ್ತಾ ಸಂಚು ವಾರ ಪತ್ರಿಕೆಯವರು ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ವ್ಯಕ್ತಿತ್ವಕ್ಕೆ ಆಘಾ ಉಂಟುಮಾಡಿದ್ದಾರೆ ಎಂಬ ನಿರ್ಧಾರಕ್ಕೆ ಬಂದು 50,000 ಸಹಸ್ರರೂಗ ದಂಡವನ್ನು ಮತ್ತು ಮೊಕದ್ದಮೆಯ ನ್ಯಾಯಾಲಯ ವೆಚ್ಚ 6304 ರೂಗಳನ್ನು ಸಂಚು ಪತ್ರಿಕೆಯವರು ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರಿಗೆ ಪಾವತಿ ಮಾಡ ಬೇಕೆಂದು ತೀರ್ಪು ನೀಡಿರುತ್ತಾರೆ.



## ಸಿದ್ಧಗಂಗಾ ಹಳೆಯ ವಿದ್ಯಾರ್ಥಿ ಸಂಘದ "ಆಜೀವ ಸದಸ್ಯತ್ವದ" ಪಟ್ಟಿ.

ಸರ್ವಶ್ರೀ :—

307 ಎಸ್.ಜಿ. ಶಿವಣ್ಣ. ಉಪಾಧ್ಯಾಯರು, ಮೂಗನಹಳ್ಳಿ, ಮಾಗಡಿ ತಾ||

308 ಎಸ್.ಎಸ್. ಪಂಚಾಕ್ಷರಯ್ಯ, ಉಪಾಧ್ಯಾಯರು. ನಂ. 217 A ಹಾಟ್ ಲೈನ್. 4ನೇ ಬ್ಲಾಕ್, ರಾಜಾಜಿನಗರ ಬೆಂಗಳೂರು-10

309 ಎಂ. ಶ್ರೀನಿವಾಸ, ಉಪಾಧ್ಯಾರು, ಜಯ ಭಾರತಿ ಕಿರಿಯ ಕಾಲೇಜು ಬ್ಯಾಲ್ಯ ಮತ್ತು ಅಂಚೆ ಮಧುಗಿರಿ ತಾ||

310 ಕೆ.ಸಿ. ಬಸವರಾಜು. ಉಪಾಧ್ಯಾಯರು, ಸರ್ಕಾರಿ ಕಿರಿಯ ಕಾಲೇಜು ಶ್ರೀನಿವಾಸ ಪುರ ಮತ್ತು ಅಂಚೆ ಕೋಲಾರ ಜಿಲ್ಲೆ-563135

311 ಕೆ.ಬಿ. ಸಿದ್ಧಲಿಂಗಯ್ಯ, ಆಯುಕ್ತರ ಕಾರ್ಯಾಲಯ (ಕಂದಾಯ) ವಿಧಾನ ಸೌಧ, ಡಾ|| ಅಂಬೇಡಕರ ವೀದಿ, ಬೆಂಗಳೂರು-56001

312 ಬಿ. ಗಂಗಾಧರಯ್ಯ, ಪ್ರಾಚಾರ್ಯರು, ಸಿವಿಲ್ ಇಂಜನಿಯರಿಂಗ್ ವಿಭಾಗ S I.T ತುಮಕೂರು.

313 ಎಸ್.ಎಸ್. ಆನಂದಯ್ಯ, ನಂ. 203, ಯೋಜನಾ ಇಲಾಖೆ. M.M.T. ಗಡಿಯಾರ ಕಾರ್ಖಾನೆ, ಬೆಂಗಳೂರು-560031

414 ವೈ ಬಿ. ವೀರಪ್ಪ ಗ್ರಾಮ ಲೆಕ್ಕಿಗ, ಮಲ್ಲಿಪಟ್ಣ ಮತ್ತು ಅಂಚೆ. ಅರಕಲಗೂಡು ತಾ|| ಹಾಸನ ಜಿಲ್ಲೆ

315 ಕೆ.ಎಂ. ಸಿದ್ಧರಾಮಯ್ಯ ಸರ್ವೆಯರ್, ಸಂಕಣ್ಣನವರ ಬೀದಿ. ತರೀಕೆರೆ ಮತ್ತು ಅಂಚೆ. ಚಿಕ್ಕಮಗಳೂರು ಜಿಲ್ಲೆ.

316 ಟಿ.ಸಿ. ಸದಾಶಿವಯ್ಯ ಸಿಂಡಿಕೇಟ್ ಬ್ಯಾಂಕ್. M G ರಸ್ತೆ ತುಮಕೂರು

317 ಎಂ. ಗಂಗಾಧರಯ್ಯ. ಉಪಾಧ್ಯಾಯರು, ಎಡಮಾರನಹಳ್ಳಿ ಮತ್ತು ಅಂಚೆ ಕನಕಪುರ ತಾ|| ಬೆಂಗಳೂರು-ಜಿಲ್ಲೆ

318 ಕೆ.ಎಂ. ಸಿದ್ದಪ್ಪ. ತರಕಾರಿ ವ್ಯಾಪಾರಿಗಳು. ಕುದುರೆಮುಖ-576132

